# ಮಮತಾ

(ನಾಟಕ)







ಲೇಖಕ:-

ಎನ್. ಎನ್. ಮಧ್ಯಸ್ಥ



ಪ್ರಕಾಶನ:-

ಸರಸ್ವತೀ ಸದನ,

೨/೫೨ ಚಾಮರಾಜಪೇಟೆ,

ಸಾಗರ. [ಶಿವಮೊಗ್ಗ ಜಿಲ್ಲೆ]

೧೯೭೩

ಬೆಲೆ ರೂ. ೧-೫೦

MAMATHA

A Drama by N. N. Madhyastha.

Published in 1973.
By Saraswathi Sadan, Sagar, Shimoga Dt.



Printed at
SHRI VIVEKANANDA PRESS, MOODBIDRI. S. K

Price: 1.50

# ಪಾತ್ರ ಪರಿಚಯಃ

1 ಆದಿಮೂರ್ತಿ
2 ಸನಾತನಿ
3 ಶೇಷಣ್ಣ
4 ವಿಶ್ವನಾಥ
(1–4) ಮಧ್ಯವಯಸ್ಸಿನ ನಾಗರಿಕರು.

5 ದೇವದಾಸ — ಆದಿಮೂರ್ತಿಯ ಮಾವ. ಬಿಳಿ ಮೀಸೆಯ ಮುದುಕ. (ನೋಟ ೪ರ ಕೊನೆಯಲ್ಲಿ ಪಾತ್ರ ಕರಿಮಾಸಿ)

6 ಪ್ರಭಾಕರ — 40 ವರ್ಷ
7 ಚಂದ್ರಕಾಂತ — 28 ವರ್ಷ
8 ಪ್ರಕಾಶ — 25 ವರ್ಷ
9 ಉದಯಕುಮಾರ — 15 ವರ್ಷ
(6–9) ಸಹೋದರರು. ಮೊದಲ ದೃಶ್ಯದಲ್ಲಿ ಕ್ರಮವಾಗಿ ಬರುವ ವ್ಯಕ್ತಿಗಳು

10 ನೂತನ — 10 ವರ್ಷ; ಆದಿಮೂರ್ತಿಯ ಮಗ
11 ವ್ಯಕ್ತಿ — ಕರಿಮುದುಕ ದರೋಡೆಕಾರ
12 ಮಾಯಾವತಿ — ಆದಿಮೂರ್ತಿಯ ಹೆಂಡತಿ.
13 ಮಮತಾ — ಚಂದ್ರಕಾಂತನ ಹೆಂಡತಿ, ದೇವದಾಸನ ಮಗಳು.
14 ಮುದುಕಿ — ಪ್ರಭಾಕರ ಮುಂತಾದವರ ತಾಯಿ.

# ಮ ಮ ತಾ

## ನೋಟ ೧

[ಅಂಗಳದ ಅರ್ಧ ಗೋಡೆಯ ಮೂಲಕ ಭಾಗವಾಗಿ ತೋರುವ ಎರಡು ಬಾಗಿಲುಗಳ ಒಂದು ಮನೆ. ಪ್ರೇಕ್ಷಕರ ಬಲಬದಿಯ ಮನೆಯು ರಂಗಭೂಮಿಯಲ್ಲಿ ಹೆಚ್ಚು ವ್ಯಾಪಿಸಿದ್ದು ಪಕ್ಕದ ಭಾಗ ಸ್ವಲ್ಪ ಮಾತ್ರ ಕಾಣಿಸುತ್ತಿದೆ. ಮನೆಯ ಬಾಗಿಲು ಮುಚ್ಚಿದೆ.]

(ಆರಂಭದಲ್ಲಿ ರಂಗಭೂಮಿಯಲ್ಲಿ ಪೂರ್ಣ ಕತ್ತಲು. ಅದಷ್ಟು ಎತ್ತರಕ್ಕೆ ಉರಿಯುವ ಪಂಜನ್ನು ಹಿಡಿದು, ನಿಧಾನವಾಗಿ ಕೋಲನ್ನು ಹಿಂದೆ ಸರಿಸಿ ಮುಂದಕ್ಕೆ ಬಾಗಿಸುತ್ತಾ ಒಬ್ಬ ವ್ಯಕ್ತಿ ಪಕ್ಕದಿಂದ ಬರುತ್ತಿದ್ದು, ರಂಗದ ಮಧ್ಯಕ್ಕೆ ಮನೆಯ ಬಾಗಿಲೆದುರು ಬಂದಾಗ ದೊಂದಿಯ ಉರಿ ಮೊಳ ದೂರ ಕೈಯಲ್ಲಿ ಇರಬೇಕು. "ಬೆಳಕು ಮೇಲಿಂದ ಕೆಳಗಿಳಿಯಿತು" ಎಂಬ ಸೂಚನೆ. ವ್ಯಕ್ತಿ ಬರುತ್ತಿದ್ದಂತೆಯೇ ನೇಪಥ್ಯದಿಂದ 'ಹೋ! ಹೋ! ಹಚ! ಹೇ' ಎಂಬ ದನ ಹೊಡೆಯುವ ಕೂಗು ಕೇಳಿಸುತ್ತಿರುತ್ತದೆ. ಹಿನ್ನೆಲೆಯಿಂದ ಹಾಡು ವೃಂದಗಾನವಾಗಿ ಬೆಳಕು ಬರುವ ತನಕ ಕೇಳಿಸುತ್ತಿದೆ.)

ಏಳಿರೀ ಎದ್ದೇಳಿರೀ ಏಳಿರೀ ಎದ್ದೇಳಿರೀ |
ಕತ್ತಲಿಂದ ಬೆಳಕಿಗೇ ನಡೆವ ನಾವು ಮುಂದಕೆ ||
ಅಸತ್ಯದಿಂದ ಸತ್ಯಕೇ ಮೃತ್ಯುವಿಂದ ಅಮೃತಕೇ .... |
ಏಳಿರೀ ಎದ್ದೇಳಿರೀ ಏಳಿರೀ ಎದ್ದೇಳಿರೀ ||
ಎತ್ತಲಿಂದ ಹೊರಟೆವೋ ಸುತ್ತಿ ಸುತ್ತಿ ಬಂದೆವೋ |
ನಾವು ನೀವು ಮನುಜರು ಒಬ್ಬ ತಾಯ ತನುಜರು ||
ಏಳಿರೀ ಎದ್ದೇಳಿರೀ ಏಳಿರೀ ಎದ್ದೇಳಿರೀ ||

ವ್ಯಕ್ತಿ:- (ಬಾಗಿಲಿಗೆದುರಾಗಿ ದೊಂದಿ ಹಿಡಿದು) ಕೋಽತ್ರ! ಉತ್ತಿಷ್ಠತ! ಜಾಗ್ರತ! ಯಾರಿಲ್ಲಿ? (ಏಳಿರಿ! ಎಚ್ಚರಗೊಳ್ಳಿರಿ!)

(ಮನೆಯ ಬಾಗಿಲು ತೆರೆಯುವುದು. ಸೊಂಟಕ್ಕೆ ದಟ್ಟಿ ಸುತ್ತಿದ್ದ ಬರಿ ಮೈಯ ಆದಿಮೂರ್ತಿ ಹಣತೆ ಹಿಡಿದು ಬರುವನು. ವ್ಯಕ್ತಿ ಮನೆಯೊಳಗೆ ನಡೆಯುವುದು.)

ಒಂದುಗೂಡಿ ಬಾಳುವಾ.... ಒಂದುಗೂಡಿ ಉಣ್ಣುವಾ ।
ಕೂಡಿ ಸತ್ವ ಪಡೆಯುವಾ.... ತಿಳಿದು ಬೆಳಗಿ ಕಲೆಯುವಾ ।
ಶಾಂತಿ ಶಾಂತಿ ಶಾಂತಿ ಓಂ! ಶಾಂತಿ ಶಾಂತಿ ಶಾಂತಿ ಓಂ ॥

[ಇಬ್ಬರೂ ಮನೆಯೊಳಗೆ ಹೋಗಿ ಬಾಗಿಲು ಮುಚ್ಚಿಕೊಳ್ಳುವರು. ಮತ್ತೆ ರಂಗಭೂಮಿಯಲ್ಲಿ ಕತ್ತಲು. "ಮಾರ್! ಧಾವಾ ಮಾರ್" (ಹೊಡೆ! ದಾಳಿ ಮಾಡು) ಗರ್ಜನೆ, ಚೀತ್ಕಾರ, ಹೊಡೆದಾಟಗಳ ಸದ್ದು, ಗಲಭೆ ಆಗುತ್ತಿದ್ದಂತೆಯೇ ಪಠಾಣ ವೇಷದ ವ್ಯಕ್ತಿ ಲಾಂದ್ರ ಹಿಡಿದು ಪ್ರವೇಶಿಸುವನು. ಬಾಗಿಲ ಮುಂದೆ ಲಾಂದ್ರ ಹಿಡಿದು)

ವ್ಯಕ್ತಿ ೨:- ಖೋಲ್! ದರವಾಜಾ ಖೋಲ್! (ತೆರೆ, ಬಾಗಿಲು ತೆರೆ)

(ಅಂಗಿ ಹಾಕಿಕೊಂಡ ಆದಿಮೂರ್ತಿ ಸೀಮೆಯೆಣ್ಣೆ ಬುರುಡೆ ದೀಪದೊಂದಿಗೆ ಒಂದು ಬಾಗಿಲು ತೆರೆಯುವನು. ಆ ವ್ಯಕ್ತಿಯನ್ನು ಒಳಗೆ ಕಳುಹಿಸಿ ಆದಿಮೂರ್ತಿ ಒಳಗಿಂದ ಬಾಗಿಲು ಹಾಕುವನು. ಮತ್ತೆ ಕತ್ತಲು. ಹಿನ್ನೆಲೆಯಲ್ಲಿ "ಏ! ನಾನು... ಏ....ನೀನಲ್ಲ ನಾನು, ಏ! ನೀವಲ್ಲ ನಾವು" ಎಂಬ ಜಗಳ ಸಾಮೂಹಿಕ ರೀತಿಯಲ್ಲಿ ಕೇಳಿಸುವುದು. ರೈಲುಗಾಡಿಯು ಸಿಳ್ಳು ಹಾಕುತ್ತಾ ಬಂದ ಸದ್ದು. ಮೋಟಾರ್‌ಕಾರ್ ಬಂದು ಹಾರ್ನ್ ಮಾಡಿದ ಸದ್ದು. ಬ್ಯಾಟ್ರಿ ಬೆಳಕು ಬಿಡುತ್ತಾ ಐರೋಪ್ಯ ನಾಗರಿಕ ವೇಷದ ಮೂರನೆ ವ್ಯಕ್ತಿ ಬರುವುದು)

ವ್ಯಕ್ತಿ ೩:- Mister! May I get in? (ಗೆಳೆಯಾ. ನಾನು ಒಳಗೆ ಬರಲೋ?)

(ಮನೆಯೊಳಗಿಂದ ಪೈಜಾಮ ಶರ್ಟು ಹಾಕಿದ ಆದಿಮೂರ್ತಿ ತಾನೂ ಬ್ಯಾಟ್ರಿ ಹಿಡಿದುಕೊಂಡು, ಬಾಗಿಲು ತೆರೆಯುವನು. ಬಂದ ವ್ಯಕ್ತಿ ಒಳಗೆ ನಡೆಯುವುದು. ಆ ಬಳಿಕ ಆದಿಮೂರ್ತಿ ಒಳಕ್ಕೆ ಹೋಗಿ, ಹಾಸಿಗೆ ಸುರುಳಿಯನ್ನು ಹೊರಕ್ಕೆ ತಂದು ಜಗಲಿಯಲ್ಲಿ ಬ್ಯಾಟ್ರಿ ಬೆಳಕಿನಲ್ಲಿಯೇ ಹಾಕಿ ಹೊದ್ದು ಮಲಗುವನು.)

(ರಂಗಭೂಮಿಯಲ್ಲಿ ಇಷ್ಟರ ತನಕ ಸೂಚಿಸಿದ್ದೇ ಬೆಳಕು. ಹಿನ್ನೆಲೆಯ ಗಾನ ಆವೃತ್ತಿಯಾಗುತ್ತಿರಬೇಕು. ರಂಗದ ಮೇಲೆ ನಿಧಾನವಾಗಿ ಪ್ರಾತಃ

ಕಾಲದ ಬೆಳಕು ಬೀಳುತ್ತಾ, ಪೂರ್ಣ ಪ್ರಕಾಶವಾಗುವುದು. ಜಗಲಿಯಲ್ಲಿ ಆದಿಮೂರ್ತಿ ಹೊದ್ದು ಮಲಗಿದ್ದಾನೆ. ಬಾಗಿಲು ತೆರೆದು ಮಾಯಾವತಿ ಬರುತ್ತಾಳೆ. ಕೈಯಲ್ಲಿ ಕಸಬರಿಕೆ ಇದೆ.)

ಮಾಯಾವತಿ:- (ಆದಿಮೂರ್ತಿಯ ಬಳಿಗೆ ಬಂದು ಕ್ಯಾಕರಿಸಿ, ಮುಸುಕೆಳೆದು) ಇನ್ನೂ ಎಚ್ಚರವಾಗಿಲ್ಲೇನು? ಎಂಥಾ ನಿದ್ದೆಯೋ? ಕುಂಭಕರ್ಣ ಸತ್ತರೂ ತನ್ನ ಸಂಪ್ರದಾಯ ಉಳಿಸಿಹೋಗಿದ್ದಾನೆ!

ಆದಿಮೂರ್ತಿ:-(ಕಣ್ಣು ಹಿಸುಕಿ, ಮೈಮುರಿದು, ಎದ್ದು ನಿಂತು) ಥೂ! ಥೂ! ಥೂ! ಬೆಳಬೆಳಗ್ಗೇ ಅವಲಕ್ಷಣ! ಶಾಂತಂ ಪಾಪಂ.

ಮಾಯಾ:- ಏನ್ರೀ ಅವಲಕ್ಷಣ? ಯಾರು? ನಾನೇ?

ಆದಿ:- ನೀನಲ್ಲ ಕಣೇ; ನಿನ್ನ ಕೈ! ಆ....ಆ....ಪೊರಕೆ! ಕಲಶ ಕನ್ನಡಿ ಹಿಡಿದು ಎಚ್ಚರಿಸುತ್ತಿದ್ದ ಈ ದೇಶದಲ್ಲಿ ಕಸಬರಿಕೆ ಹಿಡಿದು ಎಬ್ಬಿಸೋದುಂಟೇನೆ? ಅದರಲ್ಲೂ ಸಾಕ್ಷಾತ್ ಕೈಹಿಡಿದ ಮಡದಿ! ಈವೊತ್ತಿನ ದಿನವೇ ಹಾಳಾಗಿ ಹೋಯ್ತು!

ಮಾಯಾ:- ದಿನದ ಒಂದು ಜಾವ, ನಿಮ್ಮ ಗೊರಕೆಯಲ್ಲೇ ಹಾಳಾಗಿ ಹೋಯ್ತು. ಇನ್ನೂ ಪೊರಕೆ ತಗೊಳ್ಳದಿದ್ದರೆ, ಊರ ಮಂದಿ ಉಗುಳುತ್ತಾರೆ. ಅಷ್ಟೇ! ಹೊರಜಗಲಿಯಲ್ಲಿ ಈ ರೀತಿ ಕುಂಭಕರ್ಣ—

ಆದಿ:- ಮತ್ತೆ ಆ ನೀಚನ ಹೆಸರು! ಆ ಪಾಪಿ ಹೆಸರು ಹೇಳೋದೂಂಪ್ರೆ....

ಮಾಯಾ:- ಚೆನ್ನಾಗಿರಲ್ವೆ? ನಿಮ್ಮ ಗುರುವಿನ ನಾಮಶ್ರವಣ ಆದ ಹಾಗಾಯ್ತು. ಈಗೇನು ಹಾಸಿಗೆ ಸುತ್ತುತ್ತೀರೋ? ಇಲ್ಲಾ, ಅಂಗಳಕ್ಕೆ ಎಸೆಯಲೋ?

ಆದಿ:- ಹೂಂ, ಅದೂ ಆಗಬಹುದು; ಇದ್ದ ತಗಣೆ ಆಯುಷ್ಯ ಮುಗಿದಿದ್ರೆ ಸತ್ತುಹೋಗುತ್ತವೆ. ರಾತ್ರಿ ಸುಖವಾಗಿ ನಿದ್ರೆ ಬಂದೀತು.

ಮಾಯಾ:- ಮತ್ತೆ ನಿದ್ದೆಯದೇ ಯೋಚನೆ; ನಿದ್ದೆ ಮಾಡುವುದಕ್ಕೇ ಗದ್ದುಗೆ ಏರಿದವರ ಹಾಗೆ.

ಆದಿ:- (ಹಾಸಿಗೆ ಸುತ್ತುತ್ತಾ) ಏನು ತಪ್ಪಾಯ್ತು ಬಿಡೇ. ಎಲ್ಲದಕ್ಕೂ

ಅಭಾವವಾದಾಗ ನಿದ್ದೆಯಾದರೂ ಧಾರಾಳ ಸಿಗಲಿ. ನನ್ನ ಕೇಳಿದರೆ, ಅಲ್ಲಲ್ಲ, ನನ್ನ ಕೈಯಲ್ಲಿ ನಡೆಯುವ ಹಾಗಿದ್ರೆ, ಅಂದ್ರೆ ನನಗೇನಾದ್ರೂ ಅಧಿಕಾರ ಬಂದರೆ, ಪ್ರತಿಯೊಬ್ಬ ಪ್ರಜೆಗೂ ದಿನಕ್ಕೆರಡು ನಿದ್ದೆ ಗುಳಿಗೆಗಳನ್ನು ಕೊಡಿಸಿ, ನಿಶ್ಚಿಂತವಾಗಿ ನಾನೂ ಮಲಗಿಬಿಟ್ಟೇನು. ಆ ಮೇಲೇನು? ಆಹಾರ ಸಮಸ್ಯೆ, ಶಿಕ್ಷಣ ಸಮಸ್ಯೆ, ಭಾಷಾ ಸಮಸ್ಯೆ....ಎಲ್ಲಕ್ಕೂ ಹೆಚ್ಚಿನ ಪೆಡಂಭೂತ ಜನಸಂಖ್ಯಾ ಸಮಸ್ಯೆ.... ಒಂದೂ ಇಲ್ಲ.

ಮಾಯಾ:- ಇದ್ದೋರಿಗೆಲ್ಲಾ ವಿಷ ಕೊಟ್ಬಿಟ್ರೆ ಇದಕ್ಕಿಂತಲೂ ಚೆನ್ನಾಗಿರುತ್ತೆ! ಅಲ್ಲಂತೆ! ನಿದ್ದೆಗುಳಿಗೆ ಇಲ್ಲದೆಯೇ ನಿದ್ದೆಮಾಡುವ ನಿಮ್ಮಂಥವರಿಂದ ದೇಶ 'ಭಾರ' ಆಗಿಹೋಯ್ತು!

ಆದಿ:- ಸ್ವಲ್ಪ ಮೆಲ್ಲಗಾದ್ರೂ ಮಾತಾಡೇ! ಬಂದವರ ಮುಂದೆ ಇಬ್ಬರ ಮಾನವನ್ನೂ ಒಟ್ಗೇ ಕಳೆಯಬೇಡ.

ಮಾಯಾ:- (ಆಶ್ಚರ್ಯದಿಂದ) ಬಂದವರು? ಯಾರು ಬಂದವರು?

ಆದಿ:- ದೂರದಿಂದ ಬಂದವರು! ಬಾಗಿಲಲ್ಲಿ ನಿಂದವರು!

ಮಾಯಾ:- ನಿಮಗೆ ಏನಾಗಿದೇಂತೀನಿ ಈವೊತ್ತು? ಹೊರಗೆ ಮಲಗಿದ್ದಕೆ ಯಾವುದಾದರೂ ಮೋಹಿನಿಯೋ.... ಯಕ್ಷಿಣಿಯೋ....

ಆದಿ:- ಅಲ್ಲಾ, ಮಾಯೆಯೋ ಮಾಯಾವತಿಯೋ ಕೈಯಲ್ಲಿ ಪೊರಕೆ ಹಿಡಿದು, ಕುಂಭಕರ್ಣನ ಧ್ಯಾನ ಮಾಡುತ್ತಾ ಪ್ರತ್ಯಕ್ಷಳಾದಳು! ಸಾಕೇನು? ತಗೊಂಡು ಹೋಗು ಈ ಹಾಸಿಗೇನ. ಇಷ್ಟರಲ್ಲೆ ಎಷ್ಟು ಜನ ತಿಳ್ಕೊಂಡ್ರೋ, ಹೆಂಡ್ತೀ ಕೂಡ ಜಗಳಾಡ್ಕೊಂಡು, ಜಗಲಿ ಮೇಲೆ ಬಿದ್ಕೊಂಡಿದಾನೆ ಈ ಆದಿಮೂರ್ತೀಂತ. ಈಗ ನೀನೂ ಇಲ್ಲೇ ವಾದಿಸುತ್ತಾ ನಿಂತ್ರೆ ಸರಿ, ಊರ ಮಂದಿಗೂ ಪ್ರಮಾಣ ಸಿಗುತ್ತೆ. ಬಂದವರಿಗೂ ನಮ್ಮ ಪುರಾಣ ಗೊತ್ತಾಗುತ್ತೆ.

ಮಾಯಾ:- ಅರೆ! ಮತ್ತೆ ಬಂದವರೂಂತೀರಲ್ಲಾ? ರಾತ್ರಿ ಯಾರಾದ್ರೂ ಬಂದಿದ್ರೇನು?

ಆದಿ:– ಹೋಗು, ಯಾರಲ್ಲಾದ್ರೂ ಕಣಿ ಕೇಳು. ಹಾಸಿಗೆ ಮೇಲೆ ಬಿದ್ಕೊಂಡ್ರೆ ಹೊತ್ಕೊಂಡ್ಹೋದ್ರೂ ನಿನಗೆ ಎಚ್ಚರ ಆಗೋದುಂಟೇ; ಕುಂಭ-ಕರ್ಣನ ಮೊಮ್ಮಗಳಿಗೆ? ನಿನ್ನೆ ರಾತ್ರಿ ಎಷ್ಟೆಲ್ಲಾ ಮಂದಿ ಬಂದಿದ್ರು! ಅದೆಷ್ಟು ಗದ್ದಲ ಊರೆಲ್ಲ....? ನಿನಗೆ ಒಂದೂ ಗೋಚರವಾಗ್ಲಿ-ಲ್ಲಾಂದ್ರೆ ಆಶ್ಚರ್ಯ! ಹುಂ! ಈವೊತ್ತು ಡಾಕ್ಟ್ರನ್ನು ಕರೆಸಿ, ನಿದ್ದೆ ಹೊತ್ತಿಗೆ ನಿನ್ನ ನಾಡಿ ಹಿಡಿಯುತ್ತ್ಯೆ, ಉಸಿರಾಟ ಇರುತ್ತ್ಯೆ ಅಂತ ಪರೀಕ್ಷೆ ಮಾಡಿಸ್ಬೇಕು.... ಅಲ್ಲಾ, ನಾನು ಎದ್ದು ಬಂದಿದ್ದಾದ್ರೂ ಗೊತ್ತಿದೆಯೇ ನಿನಗೆ?

ಮಾಯಾ:– ಗೊತ್ತಿಲ್ದೆ? ಸತ್ತಿದ್ದೆ ಅಂತ ಮಾಡಿದ್ರಾ? ಇರುವೆ ಕಡಿಯುತ್ತಾ ಇದೆ ಎಂತ ನಿಮ್ಮನ್ನ ಎಬ್ಬಿಸಿದೋಳು ನಾನೇ ಅಲ್ವೇ? ಆ ಮೇಲೆ ಬೇರೊಂದು ಹಾಸಿಗೆ ತಗೊಂಡು ನೀವು ಜಗಲಿಯಲ್ಲಿ ಮಲಗಿದಿರಿ. ನಾನು ಅಡಿಗೆ ಕೋಣೆಯಲ್ಲಿ ಚಾಪೆ ಮೇಲೆ ಮಲಗಿದೆ.

ಆದಿ:– (ದಿಗ್ಭ್ರಮೆಯಿಂದ) ಹಾಗಿದ್ರೆ.... ಇರುವೆ ಬಂದಿತ್ತು ಅಲ್ವೇ? ಅವ ರೆಲ್ಲ ಬಂದಿದ್ದು, ನಾನು ಬಾಗಿಲು ತೆರೆದದ್ದು....

ಮಾಯಾ:– ತಿರುಗಿ ಇರುವೆ ಬಂತೇನು? ಹೂಂ, ನಿಮಗೆ ಜಾಗ ಬದಲಿ ಏನೋ ಕನಸು ಬಿದ್ದಿರಬೇಕು.

ಆದಿ:– ಕನಸೂಂತೀಯೇನು? ಛೇ! ಅಲ್ಲ ಕಣೇ! ಒಳಗೆ ಯಾರೂ ಇಲ್ವೆ?

ಮಾಯಾ:– ಒಳಗೆ ತೊಟ್ಟಿಲಲ್ಲಿ ಪುಟ್ಟ ಪಾಪು ಇದೆ. ಮಕ್ಕಳೆಲ್ಲಾ ತಾತನ ಮನೆಗೆ ಹೋದವರು ಬಂದಿಲ್ಲ. ಒಳಗಿರೋದೂಂದ್ರೆ ಬೆಕ್ಕು, ಇಲಿ, ಇರುವೆ, ತಗಣೆ, ಜಿರಳೆ....

ಆದಿ:– (ಪೆಚ್ಚಾದಂತೆ) ನಾನೇ ಬಾಗಿಲು ತೆರೆದೆ! ಒಬ್ಬರಾದ ನಂತರ ಒಬ್ಬರು ಕೂಗಿದರು! ನಾನೇ ಅವರನ್ನು ಒಳಕ್ಕೆ ಕಳುಹಿಸಿ, ಜಾಗ ಇಲ್ಲದ್ದಕ್ಕೆ ಜಗಲಿಯಲ್ಲಿ ಮಲಗಿದೆ.

ಮಾಯಾ:– ಸರಿಹೋಯ್ತು! ಬಂದವರನ್ನು ಒಳಕ್ಕೆ ಕಳುಹಿಸಿ ತಾವು ಹೊರಗೆ ಬಿದ್ದುಕೊಳ್ಳುವ ಗಂಡಸರು ನೀವು. ಎಂಥಾ ದೇಶದಲ್ಲಿ ಎಂಥಾ

ಜನಾಂಗ ಹುಟ್ಟಿಕೊಂಡಿತೋ? ನೆನಸಿನಲ್ಲಂತೂ ಇಲ್ಲ; ಕನಸಿನಲ್ಲೂ ಪೌರುಷ ಇಲ್ಲ ಎಂದ್ರೆ! ಹೇಡಿಗಳು! (ಕಸ ಹೊಡೆಯುತೊಡಗುವಳು)

ಆದಿ:– ಹೇಡಿತನ ಅಲ್ಲ ಕಣೇ! ಔದಾರ್ಯ! ತ್ಯಾಗ! ಅಹಿಂಸೆ!

ಮಾಯಾ:– ಸಾಕುಮಾಡಿ! ಮಂಗನ ಕೈಗೆ ಮಾಣಿಕ್ಯ ಸಿಕ್ಕ ಹಾಗೆ, ದೊಡ್ಡ ದೊಡ್ಡ ಶಬ್ದಗಳು ನಿಮ್ಮ ಬಾಯಿಗೂ ಎಲ್ಲಿಂದಲೋ ಬಂದು ಬಿಟ್ಟಿವೆ. ಹಣದ ಬಿಸಿ ತಿಳಿಯದ ಮಕ್ಳು ಹಿರಿಯರು ಮಾಡಿಟ್ಟಿದ್ದನ್ನು ಖರ್ಚು ಮಾಡೋ ಹಾಗೆ, ಮಾತಿನ ದುಂದುಗಾರಿಕೆಗೆ ಹೊರಟಿದ್ದೀರಿ. ಹೋಗಿ ಚೆನ್ನಾಗಿ ಮುಖ ತೊಳ್ಕೊಂಡು ಬನ್ನಿ. ಆಗಲೇ ಮಾಡಿಟ್ಟ ಕಾಫಿ ಇದೆ. ಈಗಲಾದ್ರೂ ಕುಡಿದು ಮುಗಿಸಿ.

ಆದಿ:– ಹೂಂ.... ಒಳ್ಳೇ ಕನಸು.... ಮರೆಯೋದಕ್ಕೆ ಸಾಧ್ಯವೇ ಇಲ್ಲ. ಬೆಳಗಿನ ಕನಸು ನಿಜವಾಗುತ್ತೋ ಏನೋ? ಈವೊತ್ತು ಯಾರಾದ್ರೂ ಬಂದೇ ಬರ್‍ತಾರೆ. (ಹೋಗುವನು)

ಮಾಯಾ:– (ಗಂಡ ಹೋದ ಬಳಿಕ) ಹುಂ, ಬರುತ್ತಾರೆ ದುರ್ಭಿಕ್ಷದಲ್ಲಿ ಅಧಿಕಮಾಸ ಬಂದ ಹಾಗೆ. (ಕಸ ಹೊಡೆದು ಕೈಯಲ್ಲಿ ಬಾಚಿ ಪಕ್ಕದ ಮನೆಯ ಕಡೆ ನೋಡುತ್ತಾ, ಮುಂದೆ ಪ್ರಾಕಾರ (compound) ದಾಟಿ, ಕಸ ಎಸೆದು ಪಕ್ಕದ ಮನೆಯೆದುರು ನಿಂತು ನೋಡಿ ನಿಟ್ಟುಸಿರಿಟ್ಟು ಹಿಂತಿರುಗಿ ಜಗಲಿಗೆ ಬರುತ್ತಿದ್ದಂತೆಯೇ ಆದಿಮೂರ್ತಿ ಕಾಫಿ ಹೀರುತ್ತಾ ಬಾಗಿಲಿಗೆ ಬರುತ್ತಾನೆ) ನಿಂತು ಕುಡಿಯಬಾರದಂತೆ.

ಆದಿ:– ಕುಡಿಯೋದಕ್ಕೆ ನಿಂತೇನು? ಕುಂತೇನು? ಬಂದ್ರೆ ಓಡಾಡುತ್ಲೂ ಕುಡೀಬಹುದು. ಈ ಹಳೇ ಕಂದಾಚಾರವೆಲ್ಲ ಅರ್ಥವಿಲ್ಲದ್ದು. ಈಗ ಬೈಸ್ಕಲ್ಲಲ್ಲೇ ವಾರಗಟ್ಲೆ ಸವಾರಿ ಮಾಡುತ್ತಾ ಸ್ನಾನ-ಪಾನ ಪೂರೈಸ್ತಾರೆ.

ಮಾಯಾ:– ನಿಮ್ಮ ಸವಾರಿ ಯಾವುದರ ಮೇಲೆಯೋ?

ಆದಿ:– ಭಾವನೆಯ ಮೇಲೆ! ನಿನ್ನ ಮುಂದೇನೆ ಕಾಫಿ ಕುಡಿದ್ರೆ ಕಷಾಯವೂ

ಅವ್ಯಕ್ತದ ಹಾಗಿರುತ್ತೆ. ಅದಕ್ಕೇ ಅಡಿಗೆಮನೆಯಲ್ಲಿ ನೀನಿಲ್ಲದ್ದರಿಂದ ಬರೋತನಕ ಕಾಯದೆ, ಬಟ್ಟಲು ತುಂಬಿಕೊಂಡು ಜಗಲಿಗೇ ಬಂದು ಬಿಟ್ಟೆ.

ಮಾಯಾ:- ಮನೆಯಲ್ಲಿ ಹುಡುಗರಿಲ್ಲದ್ದಕ್ಕೆ ನಿಮ್ಮ ಹುಡುಗಾಟಿಕೆ ಜೋರಾಗಿದೆ. ಬಾಗಿಲಿಂದೇಳಿ; ನನಗೆ ಒಳಗೆ ಕೆಲಸವಿದೆ.

ಆದಿ:- ಕೆಲಸ ಇದ್ದೇ ಇದೆ. ಆದರೆ ವಿಲಾಸವೂ ಇರಬೇಕಲ್ಲ? ನಾಳೆ ಹುಡುಗರು ಬಂದುಬಿಟ್ಟರೆ.... ಒಟ್ಟಿನಲ್ಲಿ ರಸಿಕರಿಗೆ ಕಸಿವಿಸಿಯೇ ಹೆಚ್ಚು. ಮೊದಲು ಹಿರಿಯರು, ಆ ಮೇಲೆ ಕಿರಿಯರು.

ಮಾಯಾ:- ಅಂದ ಹಾಗೆ ಹುಡುಗರು ಈವೊತ್ತು ಬರುತ್ತಾರೋ ಏನೋ?

ಆದಿ:- ಮಾತೃಹೃದಯಕ್ಕೆ ತುಂಬಾ ಕೊರಗೂಂತ ಕಾಣುತ್ತೆ. ಇರಲಿ. ಈವೊತ್ತು ಯಾರಾದ್ರೂ ಬಂದೇ ಬರುತ್ತಾರೆ ಎಂದೆನಲ್ಲ ಆಗಲೇ! ಬೆಳಗಿನ ಕನಸು ನಿಜವಾಗಲೇ ಬೇಕು.

ಮಾಯಾ:- ನೀವೋ ನಿಮ್ಮ ಕನಸೋ! ಏನಾದ್ರೂ ತಲೆಯಲ್ಲಿ ತುಂಬಿಕೊಳ್ಳೋದು, ಮತ್ತೆ ಅದೇ ಏನಾದ್ರೂ ಕನಸು ಬೀಳೋದು.

ಆದಿ:- ತಗೋ ಲೋಟ, ಒಳಗಿಡು. ಕೆಲಸ ಇದೆ ಎಂದೆಯಲ್ಲ, ತಕ್ಷಣ ಪೂರೈಸು. ನಾನು ಸ್ವಲ್ಪ ಬೆಳಗಿನ ಸಂಚಾರ ತೀರಿಸ್ಕೊಂಡು ಬರುತ್ತೇನೆ.

ಮಾಯಾ:- ಮತ್ತೆ ಮಧ್ಯಾಹ್ನ ಮಾಡ್ಕೊಂಡು ಬರಬೇಡಿ. ಬೇಗನೇ ಅನ್ನ ಸಾರು ಮಾಡಿಬಿಡುತ್ತೇನೆ. ನಿನ್ನೆ ರಾತ್ರೆಯೆಲ್ಲಾ ಇರುವೆ ಕಾಟಕ್ಕೆ ನಿದ್ದೆಯೇ ಇಲ್ಲ. ಊಟಮಾಡಿ ಸಂಜೆಯ ತನಕ ನಿದ್ದೆ ಮಾಡ್ತೇನೆ. (ಒಳಗಿನಿಂದ ಮಗು ಅತ್ತ ಸದ್ದು.)

ಆದಿ:- ಹುಂ! ನಿದ್ದೆ ಮಾಡುವಿಯಂತೆ! ಅಗೋ ಪಾಪು ಅಳ್ತಾ ಇದೆ. (ಮಾಯಾವತಿ ಒಳಗೆ ಹೋಗುವಳು.)

ಆದಿ:- (ಹೊರಡುವಷ್ಟರಲ್ಲಿ ದೂರದಿಂದ ಸನಾತನಿ ಬರುವುದನ್ನು ಕಂಡು) ಓಹೋ ಹೋ! ಶ್ರೀಮಾನ್ ಸನಾತನಿ! ಬಾರಯ್ಯಾ ಶನಿ! ನಿನ್ನನ್ನೇ

ಹುಡುಕುತ್ತಾ ಹೊರಡುವುದರಲ್ಲಿದ್ದೆ. ಅಷ್ಟರಲ್ಲಿ ನೀನೇ ಬಂದೆ, ಕಾಶಿಗೆ ಹೊರಟಾಗ ಗಂಗೆಯೇ ಎದುರು ಬಂದ ಹಾಗೆ!

ಸನಾತನಿ:– (ಬರುತ್ತಾ) ಕಾಶಿ–ಗಂಗೆ ಎಲ್ಲಾ ಇರೋದು ಉತ್ತರದಲ್ಲಿ ಕಣೋ! ನಾವಿರೋದು ದಕ್ಷಿಣದಲ್ಲಿ. ಹುಡುಕುವ ಬಳ್ಳಿಯೇ ಕಾಲಿಗೆ ತೊಡಕದಂತಾಯ್ತು ಅನ್ನು.

ಆದಿ:– ಗಾದೆ ಯಾವುದಾದರೇನು? ಅರ್ಥ ಎಲ್ಲಾ ಒಂದೇ. ಮುಂಹ ಮಾಂಗೀ ಮುರಾದ್ ಪಾಯಿಾ, (ಬಯಸಿದ್ದೇ ಸಿಕ್ಕಿತು) ಎಂದರೂ ನಡೆಯುತ್ತೆ.

ಸನಾ:– ಹೂಂ, ಹಿಂದಿಯೂ ಬಂದ ಹಾಗಿದೆ; ಇನ್ನೇನು? ದಕ್ಷಿಣದ ಸೇತುವನ್ನು ಉತ್ತರಕ್ಕೆ ತಿರುಗಿಸಿಟ್ಟರೆ ಸರಿ.

ಆದಿ:– ಅದನ್ನು ಸಾಧಿಸೋದು ದೊಡ್ಡ ಮಾತಲ್ಲ. ಎಪ್ಪತ್ತೇಳು ಕೋಟಿ ಕಪಿಗಳು ಕಟ್ಟಿದ ಸೇತುವೆಯನ್ನು ಐವತ್ತೊಂದು ಕೋಟಿ ಭಾರತದ ಕಲಿಗಳು ಎತ್ತಿಡಲಾರರೇ?

ಸನಾ:– ಮೊದಲು ಎರಡು ಕುರ್ಚಿ ಎತ್ತಿಕೊಂಡು ಬಾ.

ಆದಿ:– ಯಾಕೆ? ಇಲ್ಲೇ ಆಸ್ಥಾನ ನಡೆಸೋಣಾಂತೀಯೇನು? ಒಳಗೆ ನಡಿ. ಅಲ್ಲೇ ಕೂತಿರೋಣ.

ಸನಾ:– ಸೋಮಾರಿಗೆ ಛೀ ಮಾರಿಯೇ ಬೇಕು ನಿನ್ನ ಆ ಕತ್ತಲು ಕೋಣೆಗಿಂತ ಇಲ್ಲೇ ವಾಸಿ. ನಮ್ಮದು ಅಂತರಂಗ ಸಭೆಯೇನೂ ಅಲ್ಲ ಅಂತಃಪುರದಲ್ಲಿ ನಡೆಸೋಕೆ. ಹೂಂ, ಪೀಠ ತರುತ್ತಿಯೋ ನೆಲದ ಮೇಲೇ ಆಸನ ಜಮಾಯಿಸಲೋ?

ಆದಿ:– ಅರೇ! ನಿನಗೂ ಹಿಂದಿ ಗಾಳಿ ಬೀಸಿದೆ.

ಸನಾ:– ಎಲ್ಲೋ? ಯಾವಾಗಲೋ?

ಆದಿ:– ನನಗೇನು ಗೊತ್ತು? ಜಮಾಯಿಸಲೋ ಎಂದೆಯಲ್ಲ? ಅದು ನಿನ್ನ ಸಿರಿಗನ್ನಡದ ಪದವೇನೋ? (ಒಳ ಹೋಗುವನು)

ಸನಾ:– ಅಲ್ಲೇನು? ಒಂದು ವೇಳೆ ವಿದೇಶಿಯಾಗಿದ್ದರೂ ಬಳಕೆಗೆ ಬಂದಿದೆ.

ಆದಿ:– (ಎರಡು ಕುರ್ಚಿಗಳನ್ನು ತರುತ್ತಾ) ಇದಕ್ಕೇ ನಾನು ಹೇಳುತ್ತಾ ಇರೋದು ನಿನ್ನ ಭಾಷೆಯ ಮಡಿವಂತಿಕೆಯನ್ನು ಬಿಟ್ಟುಬಿಡೂಂತ. ಕಾಲಕ್ಕೆ ತಕ್ಕಂತೆ ಬದಲಾಗೋದೇ ಧರ್ಮ ಕಣೋ. ಉಡುಪು ಯಾವುದೇ ಆದರೂ ದೇಹ ನಮ್ಮದೇ ಮಾತು ಯಾವುದಾದರೂ ಮನಸ್ಸು ಒಂದೇ. ಕುಳಿತುಕೊಳ್ಳೋಣಾಗಲಿ. ಬಹಳ ಬಳಲಿ ದಂತೆ ಕಾಣುತ್ತದೆ. ಏನಾದರೂ ತಣ್ಣಗೆ ಕೊಡಲೇ ಅಥವಾ ಬಿಸಿ ಯಾಗಿ....

ಸನಾ:– ಕೊಟ್ಟೆಯಲ್ಲ ಗುಳಿಗೇನ? ಸದ್ಯ ಬೇರೇನೂ ಬೇಡ.

ಆದಿ:– ಆಂ, ಗುಳಿಗೆಯೆನ್ನುತ್ಲೂ ನೆನಪಾಯ್ತು, ಈವೊತ್ತು ಬೆಳಿಗ್ಗೆ ಏಳು ತ್ತಿದ್ದಂತೆಯೇ ಒಂದು ಹೊಸ ವಿಚಾರ ಬಂತು.

ಸನಾ:– ಏನು? ಗುಳಿಗೆ ನುಂಗೋದು ಬಿಟ್ಟುಬಿಡೋಣಾಂತ್ಲೇ?

ಆದಿ:– ಅಲ್ಲ ಅಲ್ಲ, ಕೊಟ್ಟೇ ಬಿಡೋಣಾಂತ! ದೇಶದ ಎಲ್ಲಾ ಪ್ರಜೆಗಳಿಗೂ ದಿನಕ್ಕೆರಡು ನಿದ್ದೆ ಗುಳಿಗೇನ!

ಸನಾ:– ಹುಂ, ನಿದ್ರಾದೇವಿಯ ಮಡಿಲಲ್ಲಿ ದೇಶ ಭದ್ರವಾಗಿರುತ್ತೆ. ಆದರೆ ನಿನ್ನ ಗುಳಿಗೆಗೆ ಮುಂಚೆಯೇ ಜನತೆಗೆ ಜಡತ್ವದ ಘಳಿಗೆ ಬಂದು ಬಿಟ್ಟು, ನಿದ್ದೆಯಲ್ಲೇ ಒಬ್ಬರ ಮೇಲೊಬ್ಬರು ಕಾಲು ಹೊತ್ತು ಹಾಕ್ತಾ ಇದ್ದಾರೆ.

ಆದಿ:– ಇದನ್ನೇ ನನ್ನಾಕೆಯೂ ಅಂದಳು.

ಸನಾ:– ಯಾರಾದರೂ ಇದನ್ನೇ ಅನ್ನುತ್ತಾರೆ. ಸ್ವಲ್ಪ ಧೈರ್ಯ ಬಂದರೆ ನಿನಗೆ ತಲೆ ಕೆಟ್ಟಿದೆ ಅಂತ ಕೂಡ.

ಆದಿ:– ತಲೆ ಕೆಟ್ಟಿದ್ದಲ್ಲ. ಈ ದಿನ ಹೊಸ ತಲೆಯೊಂದು ಹುಟ್ಟಿದೆ. ರಾತ್ರಿ ಯೆಲ್ಲಾ ಜಾಗೃತನಾಗಿ ಬೆಳಗ್ಗೆ ಬುದ್ಧತ್ವವನ್ನು ಹೊಂದಿದೆ.

ಸನಾ:– ಸಾಕು ಮಾಡೋ ನಿನ್ನ ತಲೆಹರಟೆ! ಅಕ್ಕ ಕೇಳಿದರೆ ಗಾಬರಿ ಮಾಡ್ಕೋತಾರೆ; ಏನಾಯ್ತು ನನ್ನ ನಮ್ಮ ಯಜಮಾನಿಗೇಂತ?

ಆದಿ:– ಸಮಾಧಾನ ಹೇಳುವುದಕ್ಕೆ ನೀನಿದ್ದೀಯಲ್ಲ? ನಾನು ಹೇಳುವ

ವಿಚಾರವನ್ನು ಕೇಳು. ಇರುವೆ ಬಂತೂಂತ ಇಲ್ಲಿ ಜಗಲಿ ಮೇಲೆ ಮಲಗಿದ್ದೆ. ಸುಮಾರು ನಾಲ್ಕು ಗಂಟೆ ರಾತ್ರಿಗೆ ಕಣ್ಣು ಮುಚ್ಚುತ್ತಿದ್ದಂತೆ....

ಸನಾ:– ಕನಸು ಕಂಡೆ ಅಲ್ಲವೇ? ಬಹುಶಃ ತುಂಬಾ ಗಂಟು ಬಂದಿರಬೇಕು ಕನಸಿನಲ್ಲಿ.

ಆದಿ:– ಊಹುಂ, ಗಂಟು ಕತ್ತರಿಸಲಿಕ್ಕೆ ಯಾರು ಯಾರೋ ಗಂಟು ಬಿದ್ದರು. ಒಬ್ಬರ ಹಿಂದೆ ಒಬ್ಬರಂತೆ ಮೂವರು ನನ್ನ ಮನೆಯೊಳಗೆ ಬಂದರು. ಇದರ ರಹಸ್ಯವೇನೂಂತೀನಿ.

ಸನಾ:– ನಿನ್ನ ತಲೆ!

ಆದಿ:– ಅದೇ ಈಗ ಕೊರೆಯುತ್ತಾ ಇದೆ. ಅವರೆಲ್ಲರೂ ನನ್ನೊಳಗೇ ಸೇರಿಕೊಂಡರು.

ಸನಾ:– (ಅರ್ಥವಾಗದೆ) ನಿನ್ನೊಳಗೇ ಸೇರಿಕೊಂಡರೆ? ಆ ಮೇಲೆ?

ಆದಿ:– ಆ ಮೇಲೆ ನನ್ನಾಕೆ ಎಬ್ಬಿಸಿದಳು. ಬಹಳ ಹೊತ್ತಿನ ಮೇಲೆ ಕಂಡಿದ್ದೆಲ್ಲಾ ಕನಸೂಂತ ಗೊತ್ತಾಯಿತು. ಇದರ ಅರ್ಥವೇನು ಹೇಳು.

ಸನಾ:– ಇದಕ್ಕೆ ಅರ್ಥವೂ ಇಲ್ಲ; ಅನರ್ಥವೂ ಇಲ್ಲ. ಸುಮ್ಮನಿರು.

ಆದಿ:– ಸುಮ್ಮನಿರೋದು ಸುಲಭವಾಗಿದ್ದರೆ ನಿನಗೆ ಹೇಳುತ್ತಿದ್ದೇನೆ? ಈ ಕನಸಿನ ಅರ್ಥ ಆದರೆ, ಎಲ್ಲ ರಗಳೆಯೂ ಬಗೆಹರಿದೀತು.

ಸನಾ:– ನೋಡೋಣ, ಯೋಚಿಸಿ ಹೇಳುತ್ತೇನೆ.

(ಕೋಲನ್ನು ಕುದುರೆ ಮಾಡಿಕೊಂಡು ನೂತನ ಪ್ರವೇಶಿಸುವನು)

ನೂತನ:– ಅಪ್ಪಾ! ಅಪ್ಪಾ! ಇಲ್ಲಿ ನೋಡು.

ಅಜ್ಜನ ಕೋಲಿದು ನನ್ನಯ ಕುದುರೆ
ಹೆಜ್ಜೆಗೆ ಹೆಜ್ಜೆಗೆ ಕುಣಿಯುವ ಕುದುರೆ
ಕಾಲಿಲ್ಲದೆಯೇ ನಡೆಯುವ ಕುದುರೆ
ಕೂಳಿಲ್ಲದೆಯೇ ಬದುಕುವ ಕುದುರೆ

(ಶ್ರೀ ಸಿದ್ಧಯ್ಯ ಪುರಾಣಿಕರ ಪದ್ಯ)

ಆದಿ:- ಏನೋ? ಏನೋ ಇದು? ಎಲ್ಲಿಂದ ಬಂದ್ಯೋ? ಯಾರ ಜೊತೆಗೆ?

ನೂತನ:- ಅಜ್ಜನ ಜೊತೆಗೆ, ಅಜ್ಜನ ಮನೆಯಿಂದಲೇ ಬಂದೆ. 'ಅಜ್ಜನ ಕೋಲಿದು ನನ್ನಯ ಕುದುರೆ'. ಈ ಕುದುರೆಯ ಮೇಲೆ, ಲುಟು ಲುಟನೆ ಬಂದೆ.

ಆದಿ;- ತಾತ ಎಲ್ಲೋ ಮತ್ತೆ? ಅಕ್ಕ, ತಮ್ಮ ........

ನೂತನ.- ಎಲ್ಲರೂ ಬರುತ್ತಿದ್ದಾರೆ. ನಾನೊಬ್ಬನೇ ಕುದುರೆಯ ಮೇಲೆ ಓಡೋಡಿ ಬಂದೆ.

ಆದಿ:- ತುಂಟ! ಹೇಳಿಯಾದರೂ ಬಂದಿದ್ದೀಯೋ?

ನೂತನ:- ಬಸ್‌ನಿಂದ ನಾನೇ ಮೊದಲು ಇಳಿದೆ. ಅವರೆಲ್ಲ ಇಳಿಯುವಷ್ಟರಲ್ಲಿ........

ಅಜ್ಜನ ಕೋಲಿದು ನನ್ನಯ ಕುದುರೆ<br>ಲುಟು ಲುಟು ಓಡಿತು ನನ್ನಯ ಕುದುರೆ

ಆದಿ:- ನಿನ್ನನ್ನು ಹುಡುಕುತ್ತಾ ತಾತ ಗಾಬರಿಯಾದರೆ? ಒಬ್ಬನೇ ಬರಬಹುದೇನೋ?



ನೂತನ:- ಯಾಕೆ ತಾತನ ಕೋಲೆ ಇಲ್ಲವೇ ನನ್ನ ಜೊತೆಗೆ? ಅಮ್ಮಾ.... ಅಜ್ಜನ ಕೋಲಿದು ನನ್ನಯ ಕುದುರೆ (ಒಳಗೆ ಹೋಗುವನು)

ಸನಾ:- ಒಳ್ಳೇ ಫಾಟಿ ಕಣೋ ನಿನ್ನ ಹುಡುಗ.

ಆದಿ:- ಫಾಟಿಯೋ, ಲೂಟಿಯೋ? ಪಾಪ, ಮಾವನವರಿಗೆ ಪೇಚಾಟವಾಗುವ ಹಾಗೆ ಮಾಡಿದ. ನಡಿ, ಬಸ್‌ಸ್ಟೇಂಡ್ ಕಡೆಗೆ ಹೋಗೋಣ. ಈ ಹುಡುಗರ ಕಿತಾಪತಿಯೆಂದರೆ ಒಂದಿಷ್ಟೂ ಬುದ್ಧಿ ಇಲ್ಲ.

ಸನಾ;- ತಂದೆಯಂತೆ ಮಗ!

ಆದಿ:- ಹೂಂ. (ಒಳಗೆ ನೋಡಿ) ಏನೇ ನಿಮ್ಮಪ್ಪ ಬಂದಿದಾರಂತೆ! ಬಸ್ ಸ್ಟ್ಯಾಂಡ್ ಕಡೆಗೆ ಹೋಗಿ ಬರುತ್ತೇವೆ.

ನೂತನ:- (ಬಂದು) ನಾನೂ ಬರುತ್ತೇನೆ ಅಪ್ಪಾ....

ಸನಾ:– ಹಾಗಾದ್ರೆ ಓಡಿಬಂದದ್ದೇಕೋ?

ನೂತನ:– ಇದಕ್ಕೇ.... ಅಜ್ಜನ ಕೋಲಿದು ನನ್ನಯ ಕುದುರೆ

ಆದಿ:– ಸತ್ತಿತು ನಿನ್ನ ಕುದುರೆ! ಅಜ್ಜನ ಕೋಲಾಗಿದ್ದಕ್ಕೆ, ಇನ್ನೂ ಬಿಟ್ಟಿದ್ದೇನೆ. ಇಲ್ಲದಿದ್ರೆ ಅದರಿಂದ್ಲೇ ಎರಡು ಕೊಟ್ಟು, ಮುರಿದು ಒಲೆಗೆ ಹಾಕುತ್ತಿದ್ದೆ. (ನೂತನ ಪೆಚ್ಚುಮೋರೆ ಹಾಕುವನು)

ಸನಾ:– ಮಕ್ಕಳಿಗೆ ಆಟದ ಹೊರತು ಮತ್ತೇನು ಹೊಳೆಯುತ್ತೆ? ಅದಕ್ಕೆ ಇಷ್ಟೆಲ್ಲಾ ಅನ್ಬೇಕೆ? ನಿನ್ನ ಕ್ರೋಧಾಗ್ನಿಗೆ ಮಗುವಿನ ನಗೆಬುಗ್ಗೆಯೇ ಬತ್ತಿ ಹೋಯ್ತು.

ನೂತನ:– (ತಂದೆಯನ್ನು ನೋಡುತ್ತಾ ಊಂ.... ಎಂದಳುತ್ತಾ ಒಳಗೆ ಹೋಗುವನು)

ಆದಿ:– ಇದು ನಿನ್ನ ವಾತ್ಸಲ್ಯದ ಫಲಶ್ರುತಿ.

ಸನಾ:– ಪಾಪ! ಮನಸ್ಸಿಗೆ ಎಷ್ಟು ನೋವಾಯಿತೋ? ಹೊರಟ ಮಗು ಒಳಕ್ಕೇ ಹೋಯಿತು.

ಆದಿ:– ಹೋಗಲಿ ಬಿಡು; ತೊಡಕು ತಪ್ಪಿತು. ಹುಂ, ಮುಂದಾಗು.

ಸನಾ:– (ನಡೆಯುತ್ತಾ) ಮಕ್ಕಳು ತೊಡಕೇನಯ್ಯಾ?

ಆದಿ:– (ನಡೆಯುತ್ತಾ) ತೊಡಕು ಮಾತ್ರವಲ್ಲ ಕೆಡುಕು ಅಂತ ಕೂಡ ನಿರ್ಧಾರವಾಗಿ ಖಡ್ಗದ ಕುಟುಂಬ ಯೋಜನೆಗೆ ಹೊರಟಿದ್ದೇವೆ. ಮಕ್ಕಳು ಸ್ವರ್ಗದ ಬಾಗಿಲು ತೆಗೆಯೋ ಕಾಲ ಹೋಯ್ತು ಮರಿ. ಮನೆಯನ್ನು ಮಸಣ ಮಾಡಿ ಜೀವನವನ್ನೇ ನರಕ ಮಾಡಿವೆ. (ಇಬ್ಬರೂ ಮರೆಯಾಗುವರು)

— ತೆರೆ —

# ನೋಟ ೨

[ಒಂದು ಬದಿಯಿಂದ ವಿಶ್ವನಾಥನು ಮುಂದುಗಡೆ ಯಾವುದೋ ವಿಶೇಷ ವಿದೆಯೆಂದು ಬರುತ್ತಿದ್ದಂತೆಯೇ ಇನ್ನೊಂದು ಬದಿಯಿಂದ ಶೇಷಣ್ಣ ಬರುತ್ತಾನೆ]

ವಿಶ್ವನಾಥ:- ಏನು ಕಥೆ? ತಿಳೀತೇನು?

ಶೇಷಣ್ಣ:- ಎಲ್ಲಿ?

ವಿಶ್ವ:- (ತೋರಿಸಿ) ಅಲ್ಲಿ! ಭಾರಿ ಮಂದಿ ಕೂಡೇದ! ಏನೇನೋ ಗುಲ್ಲು ಕೇಳಿಸ್ತದ.

ಶೇಷ:- ಅದೋ ಬರೀ ಗುಲ್ಲು ನಿದ್ದೆಗೇಡು ಅಂತಾರಲ್ಲ ಹಾಗೆ; ಕಥೆಗಿಂತ ವ್ಯಥೆಯೇ ಹೆಚ್ಚು.

ವಿಶ್ವ:- ಯಾಕ್ರೀ? ಏನು ಸಮಾಚಾರ?

ಶೇಷ:- (ತೋರಿಸಿ) ಆ ಮನೆಯಲ್ಲಿ ಅಣ್ಣತಮ್ಮಂದಿರು ಜಗಳಾಡುತ್ತಿದ್ದಾರೆ. ಅಪ್ಪ ಸತ್ತು ತಿಂಗಳಾಗಿಲ್ಲ; ಆಗಲೇ ಯಜಮಾನಿಕೆ ಪೈಪೋಟಿ. ಮನೆಯ ಒಳಗೆ ಏನಿದೆ? ಅನ್ನೋದು ಒಬ್ಬರಿಗೂ ಗೊತ್ತಿಲ್ಲ. ಅಸ್ಥಿ ಪಂಜರದಂತಿದ್ದ ಹಳೇ ಮನೆಯಲ್ಲಿ ಅಡ್ಡಗೋಡೆ ಹಾಕಿ ಅಣ್ಣತಮ್ಮಂದಿರಿಗೆ 'ಹಿಸೆ' ಆಗಬೇಕಂತೆ.

ವಿಶ್ವ:- ಮೂರ್ಖರು! ಮುರಿದ ಮನೆ ಕಟ್ಟೊ ಬದಲು ಕಟ್ಟಿದ್ದನ್ನು ಮುರೀತಾರ. ನಾಕ ರ್‍ಹಿಡಿದ ಬುದ್ಧಿ ಹೇಳುವ ಮಂದಿ ಯಾರೂ ಇಲ್ಲ?

ಶೇಷ:- ಇದ್ದ ಬಿದ್ದವರು ಪಕ್ಷ ಕಟ್ಟಿಕೊಂಡು ವಾದಿಸ ಹೊರಟಿದ್ದಾರೆ! ಒಕ್ಕಟ್ಟನ್ನು ಮತ್ತಷ್ಟು ಸಿಕ್ಕುಗಟ್ಟಿಸಿದ್ದಾರೆ.

ವಿಶ್ವ:- ಈ ಜನಕ್ಕೆ ಎಂದು ಬುದ್ಧಿ ಬರೋದೋ?

ಶೇಷ:- ಇದ್ದದ್ದನ್ನು ಕಳಕೊಂಡಾಗ! ಅದನ್ನು ನನ್ನ ಕೂಡ ಯಾಕೆ ಕೇಳ್ತೀ? ಅಲ್ಲಿ ಹೋಗಿ ಅವರನ್ನೇ ಕೇಳು. (ಹೋಗುವನು)

ವಿಶ್ವ:- ನೀ ಒಬ್ಬ! (ಹೋಗುವನು)

# ನೋಟ ೩

[ಒಂದು ಗುಡಿಸಲ ಮುಂದೆ ತುಂಬಾ ಜನರು ಸೇರಿದ್ದಾರೆ. ಅವರಲ್ಲಿ ಪ್ರಭಾಕರ, ಚಂದ್ರಕಾಂತ, ಪ್ರಕಾಶ ಎಂಬ ಮೂವರು ಸಹೋದರರು (ಅನುಕೂಲವಿದ್ದಲ್ಲಿ ಅವರ ಹೆಂಡಿರು ಮಕ್ಕಳೂ ತಮ್ಮವರನ್ನನುಸರಿಸಿ) ಜಗಳವಾಡುತ್ತಿದ್ದಾರೆ ಅವರ ಮುಖಭಾವ ಮೊದಲ ದೃಶ್ಯದಲ್ಲಿ ಬಂದ ವ್ಯಕ್ತಿಗಳಂತೆ ಕ್ರಮವಾಗಿ ಇದೆ.]

ಚಂದ್ರಕಾಂತ:– ಚಾಬೀ ಎಲ್ಲಿ? ಡಗಿ ಜಲ್ದಿ. (ಪ್ರಭಾಕರನನ್ನು ಎಳೆಯುವನು)

ಪ್ರಕಾಶ:– (ಚಂದ್ರಕಾಂತನಿಗೆ) ತೊಲಗೋ ಆಚೆ (ಪ್ರಭಾಕರನಿಗೆ) ಕೀ ನನ್ನ ವಶ ಕೊಡು.

ಪ್ರಭಾಕರ:– ನಿಮಗೆ ಇಬ್ಬರಿಗೂ ಕೊಡುವುದಿಲ್ಲ. ಪೆಟ್ಟಿಗೆಯಲ್ಲಿ ಏನೂ ಇಲ್ಲ; ಆದರೂ ಕೀಲಿ ಕೈ ನನ್ನ ಕೈಯಲ್ಲೇ ಇರಲಿ.

ಚಂದ್ರ:– ಕ್ಯಾ ಕಹಾ? ಹುಶಾರ್! (ಏನಂದಿ? ಎಚ್ಚರ!)

ಪ್ರಕಾಶ:– ಷಟಪ್, ಯೂ, ರ್‍ಯಾಸ್ಕಲ್.

ಪ್ರಭಾ:– ಏನ್ ಮಾತಾಡ್ತೀ? (ಚಂದ್ರಕಾಂತನನ್ನು ಎಳೆಯುವನು) ಇಬ್ಬರನ್ನೂ ಹಿಡಿದು ತಳ್ಳುವನು. ಮೂವರೂ ಬಡಿದಾಡುವರು. ಉಳಿದವರು ಇದ್ದಲ್ಲಿಯೇ "ಹೊಡಿಬ್ಯಾಡ್ರಿ ಹೊಡಿಬ್ಯಾಡ್ರಿ, ಯಾರಾದ್ರೂ ಬಿಡಿಸ್ರಪ್ಪಾ" ಎಂದು ಕೂಗಾಡುತ್ತಾರೆ. ಸನಾತನಿ ಪ್ರಭಾಕರನನ್ನೂ ಆದಿಮೂರ್ತಿ ಚಂದ್ರಕಾಂತನನ್ನೂ ಒಂದು ಕಡೆಯಿಂದ, ಇನ್ನೊಂದು ಕಡೆಯಿಂದ ವಿಶ್ವನಾಥ ಪ್ರಕಾಶನನ್ನೂ ಓಡಿ ಬಂದು ಬಿಡಿಸುವರು)

ಚಂದ್ರ:– ಛೋಡೋ ಸಾಬ್. ಇವರನ್ನು ಖತಮ್ ಮಾಡ್ತೀನಿ.

ಪ್ರಕಾಶ:– ಇವನ್ನ ಶೂಟ್ ಮಾಡ್ತೀನಿ. ಅವನ್ನ ಮರ್ಡರ್ ಮಾಡ್ತೀನಿ.

ಪ್ರಭಾ:– ಇವರಿಬ್ಬರನ್ನೂ ಕಡಿದು ಚೆಲ್ಲುತ್ತೇನೆ. ತಮ್ಮಂದಿರಾಗಿ ಹುಟ್ಟಿದ್ದಾವೆ ಪೀಡೆಗಳು.

ಆದಿಮೂರ್ತಿ:– ಇದ್ದ ಮೂವರಲ್ಲಿ ಕೊಲ್ಲೋರೇ ಎಲ್ಲರೂ! ಸಾಯೋರು ಯಾರು?

ಸನಾತನಿ:– ಸಾಯೋದು ಇಲ್ಲಿ ಬಂದ ನಾವು.

ವಿಶ್ವನಾಥ:– ನಾವು ಯಾಕೆ ಸಾಯ್ತೀವಿ? ತಮ್ಮ ಹಿಂದೇನೇ ಸಾಯೋದಕ್ಕೆ ವಿಷ ಕೊಟ್ಟು ಬಂದಾರ ಇವ್ರು ತಮ್ಮ ಹೆಂಡಿರು ಮಕ್ಕಳಿಗೆ. ಆದಕ್ಕೇ ಹಿಂದು ಮುಂದಿಲ್ಲದೆ ಕಚ್ಚಾಡ್ತಾರೆ! ಈಗ ಸುಮ್ಮನಾಗ್ತಿರೋ ಇಲ್ಲ ಮೂರು ಮಂದೀನೂ ಪೋಲೀಸ್ ಠಾಣೆಗೆ ಹೋಗ್ತೀರೋ?

ಪ್ರಭಾ:– ನಾವು ನಾವು ಜಗಳಾಡ್ಕೊಂಡ್ರೆ ನೀವು ಯಾರ‍್ರೀ ಕೇಳೋಕೆ?

ಚಂದ್ರ:– ಯಾರೂಂತ ನಾನು ಹೇಳ್ತೀನೆ ಸಾಮಿ.

ಸನಾ:– ಸುಮ್ಮನಿರಯ್ಯ ನೀನು. ಯಾರಿಗೂ ಕೇಳದ ಹಾಗೆ, ಕಾಣದ ಹಾಗೆ ಜಗಳಾಡಿದ್ರೆ ನಾವು ನಿಮ್ಮ ಸುದ್ದಿಗೆ ಬರುತ್ತಿರಲಿಲ್ಲ.

ಆದಿ:– ಗೊತ್ತಾಗದೆ ಕೊಂದ್ರೆ ಅಥವಾ ಸತ್ರೆ ಆತ್ಮಹತ್ಯೆ! ಸತ್ತಿದ್ದಷ್ಟೇ ಬಂತು; ಮತ್ತೇನೂ ಆಗೋದಿಲ್ಲ.

ಪ್ರಕಾಶ.– ಕರೆಕ್ಟ್! ಡು–ಓರ್–ಡೈ (ಮಾಡು ಇಲ್ಲವೇ ಮಡಿ). ನಾವೇನೂ ಗುಲಾಮರಲ್ಲ ಇವನ ಅಡಿಯಾಳಾಗಿ ಬಿದ್ದಿರೋಕೆ! ಬ್ರಿಟಿಷರನ್ನೇ ಓಡಿಸಿದ್ದೇವೆ.

ಸನಾ:– ಸಮಾಧಾನ, ಸಮಾಧಾನ. ಎಲ್ಲರೂ ತುಸು ಸಮಾಧಾನದಿಂದ ಮೊದಲು ಉಸಿರು ತೆಗೆದುಕೊಳ್ಳಿ. ಕೂಗಾಡಿಯೇ ಉಸಿರು ಕಟ್ಟಿಸಿ ಕೊಂಡೀರಿ. ಮತ್ತೆ ಹೊಡೆದಾಡುವ ತ್ರಾಣ ಉಳಿಯಲಾರದು.

ಪ್ರಭಾ:– ತ್ರಾಣ ನನ್ನಲ್ಲಿದೆ; ಬೂದಿ ಮುಚ್ಚಿದ ಕೆಂಡ ನಾನು.

ಚಂದ್ರ:– ಗುಸ್ಸಾ (ಕೋಪ) ಬಂದ್ರೆ ಪಾಖಂಡ್ (ನೀಚ) ಇದೀನಿ ನಾನು.

ಪ್ರಕಾಶ:– ಆರ್ಡರ್! ಆರ್ಡರ್! ಜನ ತಡೆದಾಗ ದನದ ಹಾಗೆ ನುಗ್ಗ ಬಾರದು. ಇವರು ಜಡ್ಜ್‌ಮೆಂಟ್ ಕೊಡೋವಾದ್ರೆ ಕೊಡಲಿ. ನನ್ನ ಬೇಡಿಕೆ ಈಡೇರಿದರೆ ಸರಿ. ಹೊಡೆದಾಟ ಬೇಕಿಲ್ಲ. ನ್ಯಾಯಬದ್ಧ ವಾದ ಒಪ್ಪಂದಕ್ಕೆ ನಾನು ಸಿದ್ಧ

ಪ್ರಭಾ:– ಜಗಳ ನನಗೂ ಇಷ್ಟವಿಲ್ಲ.

ಚಂದ್ರ:– ಅಮನ್ ಚೈನ್ ಹಮಾರಾ ಚಮನ್ (ಸುಖ ಶಾಂತಿಯೇ ನನ್ನ ಉದ್ಯಾನ).

ಸನಾ:– ಅರೆ! ಇವನೇನು ಚಮ ಚಮ್ ಅನ್ನುತ್ತಿದ್ದಾನೆ.

ಪ್ರಭಾ:– ಇವನು ಊರು ಬಿಟ್ಟುಹೋಗಿ ಇಪ್ಪತ್ತು ವರ್ಷ ವಿಾರಿತು. ಉತ್ತರದಲ್ಲಿ ಎಲ್ಲೋ ಸತ್ತಿದ್ದ.

ಚಂದ್ರ:– ಠೀಕ್ ಹೈ! ಸತ್ತಿದ್ದ. ಈಗ ಭೂತ ಬಂದಿದ್ದಾನೆ. (ಮುಷ್ಟಿ ಎತ್ತುವನು)

ವಿಶ್ವ:– ಕ್ಷೆ ಎತ್ತೂದೆಲ್ಲಾ ಆ ಮ್ಯಾಲ. ಅದು ಹೇಡಿಗಳ ಪ್ರತಿಕ್ರಿಯೆ. ನೀವು ಅಣ್ಣತಮ್ಮಂದಿರು ಜಗಳಾಡುವುದು ತಪ್ಪು. ನಿಮ್ಮ ದೇಹ ಬೇರಾದರೂ ಪಡೆದ ದೇಹ ಒಂದೇ. ನಿಮಗೇನಾಗಬೇಕಾಗಿ ರೋದು, ಮೊದಲು ಅದನ್ನು ಹೇಳಿ.

ಪ್ರಕಾಶ:– ನನಗೆ ನ್ಯಾಯ ಬೇಕು.

ಚಂದ್ರ:– ನನಗೂ ಅದೇ.

ಪ್ರಭಾ:– ನನಗೂ ಅದೇ.

ಆದಿ:– ಅರೇ! ಎಲ್ಲರಿಗೂ ಬೇಕಾಗಿರುವುದೊಂದೇ. ಅದೇ ನ್ಯಾಯ. ಅದಕ್ಕಾಗಿ ಜಗಳಾಡಬೇಕೆ? ನ್ಯಾಯ, ಸತ್ಯ, ಧರ್ಮ ಎಲ್ಲವೂ ಒಂದೇ ಹೊರತು ಹಲವಿಲ್ಲ.

ವಿಶ್ವ:– ಈ ವೇದಾಂತ ಇವರಿಗೆ ಅಂದು ಫಲವಿಲ್ಲ. ಮುಳ್ಳು ಕೀಳದೆ ಹೊರಗಿಂದ ಲೇಪ ಹಾಕಿದ್ರೆ, ಕೀವು ಹುಟ್ಟಿ ನೋವು ಹುಟ್ಟೋದೇ ಖರೆ. ಬಿಕ್ಕಟ್ಟು ಕಳೀದೆ ಒಕ್ಕಟ್ಟು ಬೆಳೆಯೂ ಹಂಗಿಲ್ಲ. ಒಳಗೆ ಕಿಚ್ಚಿಟ್ಟು ಹೊರಗಿಂದ ಸಮತೆಯ ಮುಸುಕು ಹಾಕಿದರೆ ಗಾಳಿ ಆಡಿದಾಗ ಹೊಗೆಯಾಡೀತು.

ಸನಾ:– ಅದು ನಿಜ. ಹೇಳಿರೋ ನಿಮ್ಮ ನಿಮ್ಮ ವಿಚಾರಗಳನ್ನು. ಮಧ್ಯದಲ್ಲಿ ನಿಮ್ಮ ಮೂವರ ಹೊರತು, ನೀವು ಮೂವರು ಬಾಯಿ ಹಾಕ

ಬಾರದು ತಿಳಿಯಿತೇ? ನಿಮ್ಮಲ್ಲಿ ಹಿರಿಯವನು ಯಾರು? ನೀನ ಲ್ಲವೇ? ನಿನ್ನಿಂದಲೇ ಆರಂಭವಾಗಲಿ.

ಪ್ರಭಾ:– ನಾನು ಈ ಮನೆಯ ಹಿರಿಯ ಮಗ. ನನ್ನ ಹೆಸರು ಪ್ರಭಾಕರ. ನಮ್ಮಪ್ಪನಿಗೆ ನಾವು ನಾಲ್ಕು ಮಂದಿ ಗಂಡು ಮಕ್ಕಳು. ಐದು ಮಂದಿ ಹೆಣ್ಣುಮಕ್ಕಳು. ಅವರೆಲ್ಲಾ ಮದುವೆಯಾಗಿ ಬೇರೆ ಬೇರೆ ಕಡೆಗಳಲ್ಲಿದ್ದಾರೆ. ಇವನು ನನ್ನ ಮೊದಲನೇ ತಮ್ಮ. ಚಂದ್ರಕಾಂತ ಅಂತ ಇವನ ಹೆಸರು. ಅದು ಗಿಡ್ಡದಾಗಿ ಚಂದ್ರು ಎಂದಾಗಿದೆ. ಇವನು ಚಿಕ್ಕವನಿದ್ದಾಗಲೇ ತುಂಬಾ ತುಂಟ.

ಚಂದ್ರ:– ಖಾಮೋಶ್, ಝೂಠ್ ಹೇಳ್ತಿದಾನೆ. (ಮೌನ! ಸುಳ್ಳು ಹೇಳಿದ್ದಾನೆ)

ವಿಶ್ವ:– ಅವ ಮೊದಲು ಹೇಳಲಿ. ಆ ಮ್ಯಾಲ ನೀ ಹೇಳು.

ಪ್ರಭಾ:– ಇವನ ತುಂಟತನವನ್ನು ತಡೆಯಲಾರದೆ ಅಪ್ಪ ಒಂದು ದಿನ ಚೆನ್ನಾಗಿ ಹೊಡೆದರು. ಅದಕ್ಕೆ ಇವನು ಹೇಳದೇ ಕೇಳದೇ ಕೈಗೆ ಸಿಕ್ಕಿದ್ದನ್ನು ಎತ್ತಿಕೊಂಡು ಊರು ಬಿಟ್ಟು ಎಲ್ಲಿಗೋ ಓಡಿಹೋದ. ಇಪ್ಪತ್ತು ವರ್ಷದ ಮೇಲೆ, ನಮ್ಮಪ್ಪ ಸಾಯೋದಕ್ಕೆ ಒಂದು ದಿನ ಮುಂಚೆ, ಸಂಸಾರ ಸಮೇತ ಬಂದಿಳಿದ. ಇವನ ಸಂಸಾರ ಬೇರೆ ಜಾತಿ; ನಮ್ಮ ಜಾತಿ ಅಲ್ಲ.

ಆದಿ:– ಅಂದರೆ ಗಂಡುಜಾತಿಯಲ್ಲ, ಹೆಣ್ಣು! ಇರಬೇಕಾದ್ದೇ.

ಪ್ರಭಾ:– ಉಹುಂ, ಹಾಗಲ್ಲ. ಹೆಣ್ಣಿನ ಹೊರತು ಗಂಡನ್ನು ಯಾರಾದರೂ ಮದುವೆಯಾಗ್ತಾರೆಯೇ?

ಆದಿ:– ಯಾಕೆ? ನಿನ್ನಾಕೆ ನಿನ್ನನ್ನು ಮಾಡ್ಕೊಂಡಿಲ್ವೇ?

ಪ್ರಭಾ:– ನೀವು ತಿಳಿದವರು ಸ್ವಾಮಿ. ನಮಗೆ ಹಾಗೆಲ್ಲಾ ತಿರುಗಿಸಿ ಮಾತಾಡುವಷ್ಟು ವಿದ್ಯಾ ಇಲ್ಲ, ಇವನೂ ಇವನ ಸಂಸಾರವೂ ಬೇರೆ ಮತಕ್ಕೆ ಸೇರಿದವರು. ಆದರೂ ಈಗ ಇಲ್ಲಿ 'ಹಿಸೆ' ಕೊಡಬೇಕಂತೆ. ಇದು ಯಾವ ನ್ಯಾಯ ಹೇಳಿ? ಇನ್ನು, ಇವನು ನನ್ನ ಎರಡನೆಯ

ತಮ್ಮ. ಹೆಸರು ಪ್ರಕಾಶ್. ಇವನಿಗೆ ಈಗಿನ ಕಾಲದ ವಿದ್ಯೆ ಕೊಡಿ ಸ್ಬೇಕೂಂತ ಪರವೂರಿನ ಶಾಲೆಗೆ ಕಳುಹಿಸಿದೆವು. ಮನೆಯ ಜಮೀನೆಲ್ಲಾ ಈತನ ವಿದ್ಯಾಭ್ಯಾಸಕ್ಕೇ ಮುಗಿದು ಹೋಯಿತು. ಪರದೇಶಕ್ಕೆ ಹೋದವನು ಅಲ್ಲಿಯೇ ಯಾವುದೋ ಬಿಳಿ ಹುಡುಗಿಯನ್ನು ಕಟ್ಟಿ ಕೊಂಡು ಬಂದಿದ್ದಾನೆ, ಅದಕ್ಕಾಗಿಯೇ ಯಾವುದೋ ಕಂಪನಿಯಲ್ಲಿ ಮ್ಯಾನೇಜರ್ ಆಗಿದ್ದಾನೆ. ಕೈತುಂಬಾ ಸಂಬಳ ಬರುತ್ತೆ. ಗಿಂಬಳನೂ ಇದೆ ಅನ್ನುತ್ತಾರೆ ಅನೇಕರು. ಇವನು ಅಪ್ಪ ಸತ್ತ ಮೇಲೆ ಒಂದು ದಿವಸದ ಬಳಿಕ ಬಂದ. ಇವನಿಗೂ ಈಗ 'ಹಿಸೆ' ಬೇಕಂತೆ. ಇಲ್ಲಿ ಏನಿದೇಂತ ಕೊಡಬೇಕೋ? ಇದ್ದುದೆಲ್ಲಾ ಇವನ ದೆಸೆಯಿಂದಲೇ ಹಾಳಾಯ್ತು. ಇನ್ನು ಮೂರನೆಯ ತಮ್ಮ ಉದಯ. ಇನ್ನೂ ಹದಿನೈದು ವರ್ಷದ ಹುಡುಗ.

ವಿಶ್ವ:– ಅವನೂ ತಯಾರಾಗ್ತಾನ! ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲಾ ಅಂತಾರಲ್ಲ? ಅವ ಕೂಡಾ ನಿಮ್ಮನ್ನು ಕಂಡು ಗುದ್ದಾಡ್ಲಿಕ್ಕೇ ಕಲೀತಾನ. ಕಂಡು ಕಲಿಯೂದಕ್ಕೂ ಉಂಡು ತೇಗುದಕ್ಕೂ ಕಲಿಸಿಕೊಡಬೇಕಾಗಿಲ್ಲ.

ಪ್ರಭಾ:– ನಮ್ಮಪ್ಪ ಸಾಯೋವಾಗ ಉದಯನ ರಕ್ಷಣೆಯ ಹೊಣೆಯನ್ನು ನನಗೆ ಒಪ್ಪಿಸಿದ್ದ. ನನ್ನದೂ ಬೆಳೆದ ಸಂಸಾರ. ಉದಯನಿಗೆ ಇನ್ನು ಮುಂದೆಯೇ ಎಲ್ಲವೂ ಆಗಬೇಕಾಗಿದೆ.

ಆದಿ:– ಮೊಳಕೆಗೇ ಬಿಸಿನೀರು ಸುರಿದರೆ ಮುಂದೆ ಆಗುತ್ತೆ ಸಮಾಧಿ!

ಪ್ರಭಾ:– ನಾನಿರುತ್ತಾ ಅದು ಆಗಕೂಡದು.

ಸನಾ:– ಯಾಕೆ?

ಪ್ರಭಾ:– ಅವನು ನನ್ನ ತಮ್ಮ.

ವಿಶ್ವ:– ಮತ್ತೆ ಇವರು?

ಪ್ರಭಾ:– ಇವರೂ ತಮ್ಮಂದಿರೇ.

ಆದಿ:– ಹಾಗಾದರೆ ಒಂದು ಕಣ್ಣಿಗೆ ಬೆಣ್ಣೆ, ಇನ್ನೊಂದಕ್ಕೆ ಸುಣ್ಣ ಎನ್ನುವ

ಪಕ್ಷಪಾತ ನೀತಿಯೇನು ನಿನ್ನದು?

ಪ್ರಭಾ:- ಉಹುಂ, ಹಾಗಲ್ಲ, ಇವರು ರೆಕ್ಕೆ ಬಲಿತ ಹಕ್ಕಿಗಳು. ಹಾರಿ ಹೋಗಿ ಬೇರೆಯೇ ಗೂಡು ಕಟ್ಟಿಕೊಂಡವರು.

ಚಂದ್ರು:- ಉದಯನ ದೇಖ್ ರೇಖ್ (ನಿರೀಕ್ಷಣೆ) ನನಗಿರಲಿ.

ಪ್ರಕಾಶ:- ಉದಯನ 'ರೆಸ್ಪೋನ್ಸಿಬಲ್' ನಾನು.

ವಿಶ್ವ:- ಕಿರೇ ತಮ್ಮನ ಮೇಲೆ ಎಲ್ಲರಿಗೂ ಮಮತಾ ಅದ. ಅವನ ಭವಿಷ್ಯದ ಚಿಂತಿ ಅದ. ಅಂದ ಮ್ಯಾಲ ಎಲ್ಲರೂ ಕೂಡಿ ಬಾಳೂದಕ್ಕೊ ಏನು?

ಪ್ರಭಾ:- ಇವರ ಮಮತೆಯ ರಹಸ್ಯ ಕೇವಲ ಯಜಮಾನಿಕೆ, ಅಧಿಕಾರ,

ಸನಾ:- ನಿನ್ನ ಮಮತೆಗೂ ಅದೇ ಅರ್ಥವಾಗುವುದಿಲ್ಲವೇ?

ಪ್ರಭಾ:- ಇಲ್ಲ; ನನ್ನ ಕರ್ತವ್ಯ ಅದು. ನಮ್ಮಪ್ಪ ನನಗೆ ಆ ಹೊಣೆಯನ್ನು ಕೊಟ್ಟಿದ್ದಾರೆ.

ಚಂದ್ರು:- ಝೂಠ್ ಹೇಳ್ತಿದ್ದಾನೆ. ನಾನು ಮೊದಲಿಂದ ಇಲ್ಲೇ ಇರುತ್ತಿದ್ದರೆ ನನಗೇ ಹೇಳುತ್ತಿದ್ದ. ಇವನು ಬೇಈಮಾನ್ (ಅಪ್ರಾಮಾಣಿಕ)

ಪ್ರಕಾಶ:- ನಮ್ಮ ಫಾದರ್ಸ್ ಡೆತ್‌ಗೆ ಮುಂಚೇನೆ ನಾನು ಬಂದಿರುತ್ತಿದ್ದರೆ ಉದಯ ನನ್ನ ಕಸ್ಟಡಿಯಲ್ಲಿರುತ್ತಿದ್ದ.

ವಿಶ್ವ:- ಈಗ ಉದಯನನ್ನೇ ಕೇಳಿದ್ರ ವಾದ ಇತ್ಯರ್ಥ ಅಗ್ತದ.

ಪ್ರಕಾಶ:- ನೋ ನೋ, ಅವನು ಇನ್ನೂ ಮೈನರ್.

ಸನಾ:- ಮೈನರೆಯಲಿಕ್ಕೆ ಉದಯ ಹೆಣ್ಣೇನು?

ಪ್ರಕಾಶ:- ಥತ್! ಇಷ್ಟೂ 'ಕಾಮನ್ ಸೆನ್ಸ್' ಇಲ್ಲ ನಿಮಗೆ? ಅವನು ಇನ್ನೂ ಚಿಕ್ಕ ಬಾಲಕನು.

ಸನಾ:- ನಿಮ್ಮ ಕಲಬೆರಕೆ ಭಾಷೆ ನಮಗೆ ಹೇಗೆ ಬರಬೇಕು?

ಪ್ರಕಾಶ:- ಊರು ಬಿಟ್ಟುಹೋಗುವ ಸೀಕ್ವೆನ್ಸ್ ಬಂದಿದ್ದರೆ ನಿಮಗೂ ಬರುತ್ತಿರಲಿಲ್ಲ ನಿಮ್ಮ ಮದರ್ ಟಂಗ್.

ಆದಿ:– ನಾನು ಹೇಳಿದ್ದಿಲ್ಲೇನೋ ಸನಾತನಿ? ಭಾಷೆಯಲ್ಲಿ ಮಡಿವಂತಿಕೆ ಬೇಡಾಂತ.

ಸನಾ:– ನಿನ್ನಂಥವನಿಗೆ ಯಾವುದೂ ಬೇಡ. ಯಾವ ಗಂಡು ಹೆಣ್ಣಾದರೂ ಹೇಗೆ ಬೇಕಾದರೂ ಇರಬಹುದಲ್ಲವೇ?

ಆದಿ:– ಓಹೋ ಧಾರಾಳವಾಗಿ! ಒಟ್ಟಿಗೆ ಇದ್ದ ಮಾತ್ರಕ್ಕೆ ಕಟ್ಟಿಕೊಂಡ ಹಾಗಾಗಲಿಲ್ಲ. ಭಾಷೆ ಬೇಕಾಗಿರೋದು ವ್ಯವಹಾರಕ್ಕೆ. ಅದು ಆದಷ್ಟು ಸುಲಭವಾದರೆ ಸರಿ. ಒಡಹುಟ್ಟಿಗಳು ಒಟ್ಟಾಗಿ ಬಾಳ ಬೇಕು ಎಂಬುದಕ್ಕಾಗಿಯೇ ಅಲ್ಲವೇ ನಾವಿಲ್ಲಿ ಸೇರಿದ್ದು? ಭಾಷೆಗೂ ಅದನ್ನೇ ಅನ್ವಯಿಸು. ವೇಷಕ್ಕೂ ಅದನ್ನೇ ಹೊಂದಿಸಿಕೋ. ಭೇದ ಹುಟ್ಟಿಸುವವರು ನಿನ್ನಂಥವರು ಕಣೋ.

ಸನಾ:– ಹಿಮ್ಮೇಳ ಅಂತ ಅಪಸ್ವರ ಕೊಡಬೇಡ. ಈ ಸಂದರ್ಭದಲ್ಲಿ ನಿನ್ನ ವಾದ ಕಟ್ಟಿಡು. ಆ ಮೇಲೆ ಬಿಡುವಾಗಿ ಈ ಸಮಸ್ಯೆಯನ್ನು ಬಿಡಿಸೋಣ.

ಆದಿ:– ಆಗಲಿ, ಸದ್ಯ ಇವರ ವಾದಕ್ಕೆ ಪರಿಹಾರವೇನು? ಉದಯನ ಮಾತು ಕೇಳುವುದು ಒಂದು ರೀತಿಯಿಂದ ಸರಿಯೂ ಅಲ್ಲ; ವಯಸ್ಸಿನಲ್ಲಿ, ವಿದ್ಯೆಯಲ್ಲಿ ಹಾಗೂ ಅಂತಸ್ತಿನಲ್ಲಿ ಕಿರಿಯರಾದವರು ಬೇರೆಯವರ ಪ್ರಭಾವಕ್ಕೆ ಒಳಗಾಗುವುದು ಸಹಜ.

ವಿಶ್ವ:– ಎಲ್ಲಾನೂ ಸಹಜ. ಮನುಷ್ಯರೊಳಗೆ ಪರಸ್ಪರ ಪ್ರೇಮ ಅನ್ನೋದು ಸಹಜ ಗುಣ. ಆದರೆ ಕೃತ್ರಿಮವಾದ ವಿರೋಧವೇ ಪ್ರಬಲವಾಗೇದ, ದೇಶದ ಐಕ್ಯಕ್ಕಿಂತಲ್ಲಾ ಅನೈಕ್ಯವೇ ಎದ್ದು ಕಾಣೂ ಹಂಗ. ಖರೆ ಹೇಳ್ಬೇಕಂದ್ರೆ ಹಗಲು ಹೊತ್ತಿನಾಗೇ ಮನುಷ್ಯರಿಗೆ ಕಗ್ಗತ್ತಲಾಗೇದ.

ಪ್ರಭಾ:– ಆ ಕತ್ತಲಿಂದ ಬೆಳಕಿಗೆ ಕರೆದೊಯ್ಯಬೇಕೂಂತ ನಿಮ್ಮನ್ನು ಕೇಳೋದು. (ಆದಿಮೂರ್ತಿ ಅವನನ್ನೇ ಅಭಿಪ್ರಾಯಗರ್ಭಿತವಾಗಿ ನೋಡುತ್ತಾನೆ.)

ಸನಾ:– ಚೆನ್ನಾಗಿದೆ ನಿನ್ನ ಮಾತು. ಕುರುಡರ ಕೈಹಿಡಿದು ಕುರುಡರೇ ನಡೆದ ಹಾಗಾಯಿತು. ಎಲ್ಲರೂ ದಾರಿ ತಪ್ಪಿದವರೇ; ತಾವು ತಾವೇ

ದಾರಿ ಹುಡುಕಬೇಕು; ಎಡವಿ ಬೀಳಬಾರದು ಎಂದು ಮಾತ್ರ ಎಲ್ಲರಿಗೂ ಗೊತ್ತಿದೆ. ಆದರೆ ಬಿದ್ದು ನೋವಾಗಿಯೇ ಬುದ್ಧಿ ಬರೋದು.

ವಿಶ್ವ:- ಏನಪ್ಪೋ ಸನಾತನಿ ನೀನೇ ಹಿಂಗಂದ್ರ ಹ್ಯಾಂಗ? ಸುಮ್ಮನೆ ಕಂಡು ಕೇಳಿ ಹೋಗೂದಕ್ಕ ಇದೇನು ಬಯಲಾಟವೇ? ಬಂದಿದ್ದಕ್ಕೆ ಮನಸ್ಸಿಟ್ಟು ಯೋಚ್ನೆಮಾಡಿ ಸಮಸ್ಯೇನ ಬಗೆಹರಿಸೂ ಯತ್ನ ಮಾಡ್ಬೇಕು.

ಸನಾ:- ನಾವು ಬಂದದ್ದೇ ತಪ್ಪಾಯ್ತು ಬಿಡು; ಹೀಗೆ ತಲೆನೋವು ತಂದಿಡುತ್ತಾರೇಂತ ಗೊತ್ತಿರಲಿಲ್ಲ.

ಆದಿ:- ಆದರೂ ಬಂದಿದ್ದೇವೆ. ಇಲ್ಲಿಗೆ ಯಾರು ಕರೆದಿದ್ದರು ನಮ್ಮನ್ನು.

ವಿಶ್ವ:- ಕರೀದೇ ಓಡಿಬಂದಿದ್ದೀವಲ್ಲ, ಇದೇ ಭಾರತದ ಒಕ್ಕಟ್ಟಿನ ಗುಟ್ಟು. ಸೋದರರು ಬಡಿದಾಡುತ್ತಿದ್ದಾಗ ಸೋದರರಲ್ಲದ ನಮ್ಮನ್ನು ತಾನಾಗಿ ಎಳೆದುತಂದದ್ದು ಮನುಷ್ಯತ್ವದ ಒಕ್ಕಟ್ಟು.

ಆದಿ:- ಹುಟ್ಟಿದ ಒಡಲು ಬೇರಾದರೂ ಬೆಳೆದ ನೆಲ, ತಾಯಿ ಮಡಿಲು ಒಂದೇ ಅಲ್ಲವೇ?

ಚಂದ್ರು:- ಏನ್ ಸಾಮಿ? ನೀವೇ ಒಹರ್ಸ್ (ಚರ್ಚೆ) ಮಾಡ್ತಿರೋ ಅಲ್ಲಾ ನಮ್ದೂ ಕೇಳ್ತಿರೋ?

ಸನಾ:- ಆಗಲಿ ನಿನ್ನ ವಿಚಾರ ಹೇಳು.

ಚಂದ್ರ:- ನಾನು.... ನಾನು.... (ಗಂಟಲು ಗದ್ಗದ.... ಕಣ್ಣೀರು ಉಕ್ಕುವುದು)

ವಿಶ್ವ:- ಹೇಳಪ್ಪಾ ಧೈರ್ಯವಾಗಿ ಹೇಳು. ತಕ್ಷಣ ಅಳೋದಕ್ಕೆ ಏನಾಯ್ತು?

ಚಂದ್ರ:- ನಹೀ.... ನಾನು ಅಳ್ತಾ ಇಲ್ಲ. ವ್ಹೆ ಮರ್ಸ್ ಹೂಂ. (ನಾನು ಗಂಡಸು)

ಆದಿ:- ಮರ್ದ್ ಎನ್ನುತ್ತಿ; ಮುರ್ದಾ (ಹೆಣ) ಮುಖ ಮಾಡ್ತಿಯಲ್ಲೋ.

ಚಂದ್ರು:- ಗಡಾ ಮುರ್ದಾ ಕ್ಯಾ ಉಖಾಡೂಂ? ಜೋ ಬೀತ್ ಗಯಿಸೋ ಬೀತ್‌ಗಯಿ (ಹೂತ ಹೆಣವನ್ನು ಯಾಕೆ ಕೀಳಲಿ. ಆದಿದ್ದು ಆಗಿಯೇ ಹೋಯಿತು)

ಸನಾ:- ಹಾಗೆಂದರೆ? ಏನನ್ನುತ್ತಾನೆ ಇವನು?

ಆದಿ:- 'ಹೊತ ಹೆಣ ಕೇಳೋದೇನು? ಆಗಿದ್ದು ಆಗಿಹೋಯ್ತು' ಎನ್ನುತ್ತಾನೆ.

ಚಂದ್ರ:- ನಾನು.... ಉಹುಂ.... ಸಬ್ ಕುಛ್ ಭೂಲ್ ಗಯಾ. ಅಪನೀ ಬೋಲೀ ತರ್ ನಹಿಂ ಆತೀ. ಕನ್ನಡ ಠೀಕ್ ಬರ್ತಾಕಿಲ್ಲಾ. (ಎಲ್ಲವನ್ನೂ ಮರೆತೆ; ನನ್ನ ಮಾತೇ ಬರುವುದಿಲ್ಲ, ಕನ್ನಡ ಚೆನ್ನಾಗಿ ಬರುವುದಿಲ್ಲ)

ಸನಾ:- ಒಳ್ಳೇ ಪೇಚಾಟಕ್ಕೆ ಬಂತು; ಮಾತೃಭಾಷೆಯನ್ನೇ ಮರೆತವನಿಗೆ ಮಾತೃಭೂಮಿಯಲ್ಲಿ ಭಾಗ ಮಾತ್ರ ಬೇಕು. ಹ ಹ್ಹ ಹ್ಹ! ಗಿಟ್ಟೋ ಹಾಗಿದ್ದರೆ ಬಾಡಕಟ್ಟು ನೆನಪಾಗುತ್ತದೆ.

ಚಂದ್ರ:- ಏನ್ ಸಾಮಿ.... (ಉಗುಳು ನುಂಗಿ) ನನ್ನ ಚೇಹರೇ (ಮುಖ) ಮೇಲೆ ಥೂಕ್ (ಉಗುಳು) ಮಾಡು! ಮೇರಾ ಸಿರ್ ಕಾಟ್ ಡಾಲೋ ತಾಕಿ ಮೇರೀ ಲಾಶ್ ಇಸ್ ಮಿಟ್ಟೀ ಮೆಂ ಸಮಾಜಾವೆ. (ನನ್ನ ತಲೆಯನ್ನೇ ಕಡಿದು ಹಾಕು; ಹಾಗಾದರೂ ನನ್ನ ಹೆಣ ಈ ಮಣ್ಣಿಗೆ ಸೇರಲಿ.)

ಆದಿ:- ಛೆ! ಛೆ! ನಿನ್ನ ತಲೆ ಕಡಿಯುವುದಕ್ಕೆ ನಾವು ಯಾರು? ನಿನ್ನ ಹೆಣ ಈ ಮಣ್ಣಿನಲ್ಲಿ ಸೇರುವ ಸಂದರ್ಭವಾದರೂ ಏನು? ಊರು ಬಿಟ್ಟು ಇಪ್ಪತ್ತು ವರ್ಷದ ಮೇಲಾಯ್ತು, ನಿನಗೆ ಕನ್ನಡ ಮರೆತಿದ್ದರೆ ಅದು ತಪ್ಪಲ್ಲ. ನಮ್ಮ ಕರ್ನಾಟಕದ ಅಲ್ಲಲ್ಲ ಮೈಸೂರಿನಲ್ಲಿಯೇ ಹುಟ್ಟಿ, ಇಲ್ಲಿಯೇ ಅನ್ನ ತಿಂದು ಇಲ್ಲಿನ ಹಣದಲ್ಲಿಯೇ ಓದಿದವರಿಗೂ ಕನ್ನಡ ಬರೋದಿಲ್ಲವಂತೆ!

ಸನಾ:- ಅದಕ್ಕೇ ಕಣೋ ಭಾಷಾ ಪ್ರಾಂತ್ಯದ ಅಡ್ಡಗೋಡೆ ಹಾಕಿದ್ದು, ತಂತಮ್ಮ ಭಾಷೆ ಸಂಸ್ಕೃತಿಯನ್ನುಳಿಸಿ ಬೆಳೆಸಬೇಕೆಂದು ಈ ನಾಡಿನ ಒಳಗಿದ್ದವರು, ಇಲ್ಲಿನವರು ಕನ್ನಡವನ್ನೇ ಆಡಬೇಕು.

ಆದಿ:- ಹೊರನಾಡಿನಲ್ಲಿದ್ದ ಕನ್ನಡಿಗರು....?

ಸನಾ:– ಅವರ ಪಾಡು ಅವರಿಗೆ.

ಆದಿ:– ಸರಿ, ಸನಾತನಿ, ನೀನೀಗ ಎಲ್ಲಿದ್ದೀ?

ಸನಾ:– (ಪೆಚ್ಚಾಗಿ) ಎಲ್ಲಿ ಎಂದರೆ? ಇಲ್ಲಿ. ನನ್ನ ನಾಡಿನಲ್ಲಿ.

ಆದಿ:– ಮನೆಯಲ್ಲಿರುವ ನಿನ್ನ ಅಪ್ಪ ಅಮ್ಮ "ನೀನು ಮನೆಯ ಹೊರಗಿದ್ದೀಯೆ. ಆದ್ದರಿಂದ ಒಳಗೆ ಸೇರಿಸುವುದಿಲ್ಲ" ಎಂದು ಬಾಗಿಲು ಹಾಕಿಕೊಂಡರೆ?

ಸನಾ:– ಅವರು ಹಾಗೆ ಮಾಡುವುದಿಲ್ಲ. ವಾತ್ಸಲ್ಯ ಮಮತೆಗಳಿಗೆ ಬಾಗಿಲು, ಗೋಡೆ, ದುರ್ಗಮ, ಶೈಲ, ವಿಶಾಲ ಸಾಗರ ಒಂದೂ ತಡೆಯಾಗ ಲಾರದು.

ಆದಿ:– ಹಾಗಿದ್ದರೆ ಭಾಷಾ ಪ್ರಾಂತದ ಅಡ್ಡಗೋಡೆ ಮಿಶ್ರದೇಶದ ಪಿರಾ ಮಿಡ್ ಅಲ್ಲ ಎಂಬುದನ್ನು ನೆನಪಿಡು.

ಪ್ರಕಾಶ:– ಏನ್ ಸರ್? ನಾವು ಸುಮ್ಮನಿದ್ದೀವೀಂತ ನೀವು ಜಗಳಕ್ಕೆ ಹೊರ ಟರೇನು? ನೀವು ಇಷ್ಟಕ್ಕೇ ಬಂದಿದ್ದಾದರೆ ನಾವೂ ಅಷ್ಟನ್ನು ಮಾಡು ತ್ತಿದ್ದೆವು. ಎಜುಕೇಟೆಡ್ ಅಂಡ್ ಸಿವಿಲೈಸ್ಡ್ ಆದ ನೀವು ಹೇಳಿದ ರೆಂದು, ನಾವು ತುಟಿ ಕಚ್ಚಿ ತಡೆದಿದ್ದೇವೆ. ಓದದ ಮುಂದಿಗೆ ಒಂದು ಜಗಳವಾದರೆ ಓದಿದ ಮುಂದಿಗೆ ಹನ್ನೊಂದು ಜಗಳ ಎಂದ ಹಾಗಾ ಯಿತು.

ವಿಶ್ವ:– ಹೂಂ, ನಿನಗೂ ಕನ್ನಡ ಬರ್ತದ. ತುಸು ಬೆರಕೆ ಅಷ್ಟೇ.

ಪ್ರಕಾಶ:– ಅದು ಕಾಲ ಕಟ್ಟಿದ ಕಸಿ ಮಿಸ್ಟರ್.

ವಿಶ್ವ:– ಕಸಿ ಕಟ್ಟಿದರೂ ಹುಸಿ ಹೂ ಬಿಟ್ಟರೆ ಫಲವೇನು? ಮಾತಿಗಿಂತ ಮನಸ್ಸು ಮುಖ್ಯ ಅಂತ ನನ್ನ ಅಭಿಪ್ರಾಯ.

ಚಂದ್ರ:– ತೋ ದಿಲ್ ಕಾ ದರವಾಜಾ ಖೋಲ್ (ಹಾಗಾದರೆ ಹೃದಯದ ಬಾಗಿಲನ್ನು ತೆರೆ). [ಬೇಸರದಿಂದ ತಲೆಯನ್ನು ಅದುಮಿ ಸರಿದು ನಿಲ್ಲುವನು]

ಆದಿ:– (ತನ್ನಷ್ಟಕ್ಕೆ ಎಂಬಂತೆ) ದರವಾಜಾ ಖೋಲ್ (ಬಾಗಿಲು ತೆರೆ) [ದಿಟ್ಟಿಸಿ ನೋಡುವನು]

ಸನಾ:– ಯಾಕೋ ಕನವರಿಸುತ್ತೀ?

ಆದಿ:– ಅದೇ ಮಾತು! ಅದೇ ಮುಖ! ಬೆಳಗ್ಗೆ ಕನಸಿನಲ್ಲಿ....

ಸನಾ:– ನಿನ್ನ ಕನಸಿನ ಕತೆ ಹಾಳಾಯ್ತು. ಅದನ್ನು ಆ ಮೇಲೆ ಯೋಚಿಸೋಣ. ಈಗ ಇವರಿಗೇನು ಹೇಳೋಣ. ಗುಡುಗು ಮಿಂಚಿನ ಮೋಡದ ಹಾಗೆ ಈ ಚಂದ್ರ ಹನಿಹನಿಯಾಗಿ ಕರಗಿಹೋಗಿದ್ದಾನೆ. ಪಾಪ! ಜೀವನದಲ್ಲಿ ತುಂಬಾ ನೊಂದಿದ್ದಾನೆ.

ಪ್ರಕಾಶ:– ನನ್ನ ನೋವೂ ಕಡಿಮೆಯಲ್ಲ ಸ್ವಾಮಿ!

ವಿಶ್ವ:– ಆಗಲಿ, ನಿನ್ನ ವಿಚಾರವನ್ನೇ ಕೇಳು. ಅಷ್ಟು ಹೊತ್ತಿಗೆ ಚಂದ್ರು ಸಂಭಾಳಿಸಬಹುದು

ಪ್ರಕಾಶ:– ನಾನು ಹೆಚ್ಚೇನೂ ಹೇಳುವುದಿಲ್ಲ. ಲೆಸ್ ಟಾಕ್ ಮೋರ್ ವರ್ಕ್ ಪೋಲಿಸಿ ನನ್ನದು. ನಾನು ಪರಊರು ಪರದೇಶಗಳಲ್ಲಿ ಓದಿದ್ದು ನಿಜ. ಹಾಗೆ ಓದದೆ ಹೋಗಿದ್ದರೆ, ಇಷ್ಟರಲ್ಲಿ ಬೀದಿಯ ಭಿಕ್ಷುಕನಾಗಿ ಉಳಿಯಬೇಕಿತ್ತು ಅಥವಾ ಆತ್ಮಹತ್ಯೆ ಮಾಡಿಕೊಂಡು ಅಳಿಯಬೇಕಾಗಿತ್ತು. ನಾನೇ ಹಟ ಹಿಡಿದು ಓದ ಹೊರಟೆ. ನನು ಅಪ್ಪನೂ ಮೊದಲಿಗೆ ಒಪ್ಪಲಿಲ್ಲ. ಈ ಅಣ್ಣ ಈ ವರೆಗೂ ನನ್ನ ವಿದ್ಯಾಭ್ಯಾಸವನ್ನು ಒಪ್ಪಿಕೊಂಡಿಲ್ಲ. ಯಾರು ಯಾರ ಕಾಲು ಕಟ್ಟಿ ಪರಿಶ್ರಮದಿಂದ ಡಿಗ್ರಿ ಪಡೆದೆ ಸರಕಾರದ ಸಹಾಯದಿಂದ ಫಾರಿನ್ನಿಗೂ ಹೋಗಿ ಬಂದೆ. ದೇವರ ದಯೆಯಿಂದ ನನ್ನ ಪರಿಶ್ರಮಕ್ಕೆ ತಕ್ಕ ಪ್ರತಿಫಲ ಪ್ರೋತ್ಸಾಹಗಳು ದೊರೆತುವು. ಮುಂದಿನ ಜನಾಂಗವು ಉತ್ತಮವಾದೀತೆಂಬ ಕಲ್ಪನೆಯಿಂದ ಅಲ್ಲಿಯ ಹೆಣ್ಣನ್ನೇ ಮದುವೆಯಾದೆ. ಗುಣನಡತೆಯಲ್ಲಿ ಆಕೆ ಈ ದೇಶದ ಯಾವ ಸಾಧ್ವಿಗೂ ಕಡಿಮೆ ಇಲ್ಲ.

ಸನಾ:– ಈಗ ನೀನು ಸುಖವಾಗಿದ್ದೀ ಅನ್ನು. ಅಂದ ಮೇಲೆ ನೀನು ಸಹೋದರರಿಗೆ ಕೃತಜ್ಞನಾಗಿದ್ದು ಇವರಿಗೆ ನೆರವಾಗುವುದನ್ನು ಬಿಟ್ಟು ಇದ ಒಂದು ತುತ್ತಿನಲ್ಲಿ ನೀನೂ ಯಾಕೆ ಅಂಶ ಕೇಳಬೇಕು?

ಪ್ರಭಾ:- ನಾನು ಕೇಳುತ್ತಿರುವುದೂ ಅದನ್ನೇ!

ಪ್ರಕಾಶ:- ನೀನೇನು ಕೇಳುತ್ತೀಯೆ? ತಂದೆ ತಾಯಿಗೆ ಮಕ್ಕಳೆಲ್ಲರೂ ಸಮ ತಂದೆ ಬಿಟ್ಟುಹೋದುದು ನನಗೂ ಸಿಗಲೇಬೇಕು. ಇದು ಗೌರವದ ಪ್ರಶ್ನೆ. ಭಿಕಾರಿಯಾಗಿ ನಿನ್ನಲ್ಲಿ ಬೇಡಲಿಕ್ಕೆ ಬಂದಿಲ್ಲ.

ಪ್ರಭಾ:- ಕೈಯೊಡ್ಡಿ ಬಂದರೆ ಯಾವ ವೇಷದಲ್ಲಿದ್ದರೂ ಯಾವ ಸ್ಥಾನದಲ್ಲಿದ್ದರೂ ಅದು ಭಿಕ್ಷಾವೃತ್ತಿಯೇ

ಪ್ರಕಾಶ:- ಷಟಪ್, ಈಡಿಯಟ್!

ವಿಶ್ವ:- ಹಾಂ! ಹಾಂ! ಸಮಾಧಾನ, ಘರ್ಷಣೆಗೆ ಈಗ ಅವಕಾಶವಿಲ್ಲ. ಪ್ರಕಾಶ್, ನೀನು ಪರದೇಶಕ್ಕೆ ಹೋಗಿ ಬಂದರೂ ಅಲ್ಲಿನದು ಹತ್ತಲಿಲ್ಲ, ಇಲ್ಲಿನದು ಉಳಿಸಿಲ್ಲ. ಅಲ್ಲಿನ ಸ್ವಾವಲಂಬನೆ, ಇಲ್ಲಿನ ತ್ಯಾಗ, ಇದರಲ್ಲಿ ಯಾವುದನ್ನು ಆರಿಸಿಕೊಂಡರೂ ನಿನ್ನ ಸಲುವಾಗಿ, ಇಲ್ಲಿ ಯಾವ ಪ್ರಶ್ನೆಯೂ ಇಲ್ಲ.

ಆದಿ:- ಈ ತೀರ್ಮಾನ ಸರಿಯಲ್ಲ. ನ್ಯಾಯ ಎಲ್ಲರಿಗೂ ಸಲ್ಲಬೇಕು ಹಾಗೆ ನೋಡಿದರೆ ಈ ಚಂದ್ರುವೂ ಇಲ್ಲಿರಲಿಲ್ಲ. ಇದ್ದವರೆಂದರೆ ಹಿರಿಯವನು ಮತ್ತು ಅಪ್ರಬುದ್ಧನಾದ ಕಿರಿಯವನು. ಕಿರಿಯವನ ಜವಾಬ್ದಾರಿಯನ್ನು ಹಿರಿಯವನೇ ಹೊತ್ತಿರುವಾಗ ಹೋದವರನ್ನು ಹೋದಲ್ಲಿಯೆ ಬಿಟ್ಟು ಇದ್ದವರು ಮಾತ್ರ ಅನುಭವಿಸಲಿ ಎಂದರೆ..

ಪ್ರಭಾ:- ನ್ಯಾಯವಲ್ಲ ಎನ್ನುತ್ತೀರಿ ನೀವು, ಅಲ್ಲವೇ? ಆದರೆ ನನ್ನದೊಂದು ಪ್ರಶ್ನೆ. ದಿನವೆಲ್ಲಾ ಅಲ್ಲಿ ಇಲ್ಲಿ ಅಲೆದಾಡೋದು; ಊಟಕ್ಕೆ ಮಾತ್ರ ಮನೆಗೆ ಬರೋದು.... ಎಂದರೆ ಯಾರು ಮಾಡಿಟ್ಟಿರುತ್ತಾರೇಂತ? ಹೆತ್ತ ತಾಯ್ತಂದೆಗಳು ಕೂಡ ಇಂಥ ಮಕ್ಕಳನ್ನು ದೂರ ಮಾಡುತ್ತಾರೆ. ಚಂದ್ರು ಓಡಿಹೋಗಿದ್ದಕ್ಕೆ ಇದೇ ಕಾರಣ. ಪ್ರಕಾಶ್‌ಗೆ ಓದಿಸಿದ್ದೂ ಇದೇ ಮುಂದಾಲೋಚನೆಯಿಂದ.

ಆದಿ:- ಅಂದ್ರೆ ಒಬ್ಬ ಓದಿ ದೂರವಾದ. ಇನ್ನೊಬ್ಬ ಓಡಿ ದೂರ ಹೋದ. ಇಲ್ಲಿ ನಿನ್ನದೇ ಏಕಾಧಿಪತ್ಯ, ಅಲ್ಲವೇ?

ಪ್ರಭಾ:- ಅಧಿಪತ್ಯಕ್ಕೆ ಇಲ್ಲಿ ಯಾವ ರಾಜ್ಯವೂ ಉಳಿದಿಲ್ಲ. ಹಿರಿಯರು ಕೂಡಿಟ್ಟ ಮೂಲಕ್ಕಿಂತ ಮಾಡಿಟ್ಟ ಸಾಲವೇ ಹೆಚ್ಚಾಗಿ, ಅಭಾವ ಪರಿಸ್ಥಿತಿಯೊದಗಿದೆ.

ಪ್ರಕಾಶ:- ನಿನಗಾದರೆ ಮೂಲ, ನಮಗಾದರೆ ಸಾಲ ಅಲ್ಲವೇ?

ಪ್ರಭಾ:- ಸಾಲಕ್ಕೆ ಹೊಣೆ ನೀನು. ಇದ್ದ ನೆಲವನ್ನು ಬೆವರಿಳಿಸಿ ಉಳಿಸಿದವನು ನಾನು. ನಿನ್ನ ಓದಿಗಾಗಿ ಹೊಟ್ಟೆ ಬಟ್ಟೆ ಕಟ್ಟಿ ಇದ್ದುದನ್ನೆಲ್ಲ ಒತ್ತೆಯಿಟ್ಟು ಸಾಲ ಮಾಡಿ ನಿರಾಧಾರನಾದವನು ನಾನು ನಿನಗೇನು? ಆಫೀಸಿನಲ್ಲಿ ತೂಕಡಿಸಿದರೂ ತಿಂಗಳ ಕೊನೆಗೆ ಸಂಬಳ ಬರುತ್ತೆ.

ಸನಾ:- ಇದಕ್ಕೆ ನಿನಗೆ ಯಾಕೆ ಹೊಟ್ಟೆಯುರಿ?

ಪ್ರಭಾ:- ಹೊಟ್ಟೆಯುರಿಯಲ್ಲ. ಈತನ ಅತಿಯಾಸೆ ಕೃತಘ್ನತೆಗೆ ಮೈಯೆಲ್ಲಾ ಉರಿಯುತ್ತೆ ಇವರೆಲ್ಲ ತಮ್ಮಂದಿರಲ್ಲ, ಶತ್ರುಗಳು!

ಚಂದ್ರ:- ಶತ್ರು? ಯಾರು ಶತ್ರು? ಇಸ್ ಬೇಬಸ್ ಕೀ ವಾಪಸೀ ತುಮ್ಹೆಂ ಖಟ್‌ಖತೀ ಹೈ? ಅಗರ್ ಯಹೀ ಕಹೊ ಕಿ ತೇರಾ ಮೇರಾ ಕೋಯಿ ನಾತಾ ನಹೀಂ ನೀನು ತಮ್ಮ ಅಲ್ಲ ನಾನು ಅಣ್ಣ ಅಲ್ಲ ಕಹೋ, ಅಪನಾ ಹಾಥ್ ಜಗನ್ನಾಥ್ ಹೈ–ಮೈ ಚಲಾ ಜಾವೂಂಗಾ (ಈ ತಬ್ಬಲಿಯ ಮರಳುವಿಕೆ ನಿಮಗೆ ಚುಚ್ಚುತ್ತದೆಯೋ? ಒಂದು ವೇಳೆ ನನಗೂ ನಿನಗೂ ಯಾವ ಸಂಬಂಧವೂ ಇಲ್ಲ ಎಂದು ಹೇಳು. ನಾನು ಹೊರಟು ಹೋಗುವೆನು.)

ಪ್ರಭಾ:- ಏನು ಬೈಯುತ್ತಾ ಇದ್ದಿಯೋ? ಈ ಅಬದ್ಧ ಭಾಷೆಯಲ್ಲಿ? ನನ್ನ ನಿನ್ನ ಭಾಷೆಯೇ ಬೇರಾದ ಮೇಲೆ ಅಣ್ಣ ತಮ್ಮ ಅಂತ ಹೇಗೆ ಹೇಳಲಿ?

ಚಂದ್ರ:- ಐಸೀ ಬಾತ್ ಕ್ಯೆ (ಈ ಮಾತೇನು?) ಏನು ಸಾಮಿ, ಮಂಜೂರ್? (ಒಪ್ಪಿಗೆಯೇ)

ಸನಾ:- ನೀನು ಏನು ಹೇಳುತ್ತೀ ಎನ್ನೋದೇ ನನಗೆ ತಿಳಿಯುತ್ತಿಲ್ಲ.

ಆದಿ:- ನೀನು ಯಾರೋ ಬೇರೆ, ನಿನಗೂ ನಮಗೂ ಸಂಬಂಧವಿಲ್ಲ ಎಂದರೆ ಸುಮ್ಮನೆ ಹೊರಟು ಹೋಗುತ್ತಾನಂತೆ, ದೇವರನ್ನು ನಂಬಿ.

ಸಣ್ಣ:- ಹೋಗಲಿ ಬಿಡು; ಒಂದು ತಲೆನೋವು ಪರಿಹಾರವಾದ ಹಾಗಾಗುತ್ತೆ.

ಚಂದ್ರ:- ಇಸೀಲಿಯೇ ಕಹಾ ಕಿ ಮುಝೆ ಮಾರ್ ಡಾಲೋ. (ಅದಕ್ಕೇ ಹೇಳಿದೆ ನನ್ನನ್ನು ಕೊಂದು ಬಿಡಿ)

ಆದಿ:- ಕೊಲ್ಲುವ ಹಾಗಿದ್ದರೆ ಜಗಳ ನಿಲ್ಲಿಸುವುದಕ್ಕೆ ಬರುತ್ತಿದ್ದೆವೇ? ಇಲ್ಲಿ ನೋಡಪ್ಪಾ ನಿನ್ನ ಉದ್ವೇಗವನ್ನು ಸ್ವಲ್ಪ ಕಡಿಮೆ ಮಾಡು. ಸಮಾಧಾನದಲ್ಲಿ ಕೆಲವಾದರೂ ಕನ್ನಡ ಮಾತು ನೆನಪಿಗೆ ಬರುತ್ತವೆ.

ವಿಶ್ವ:- ಹಾಗಿದ್ದರೆ ಒಂದು ಕೆಲಸ ಮಾಡೋಣ. ಈಗಲೇ ಈ ಚರ್ಚೆ ಮುಗಿಯೂ ಹಂಗಿಲ್ಲ. ಹೊತ್ತೂ ಆಗಲೇ ನೆತ್ತಿಗೇರಿ ಅಪರಾಹ್ನಕ್ಕೆ ಬಂತು. ನಮ್ಮ ಆದಿಮೂರ್ತಿಗೆ ಒಂದಿಷ್ಟು ಹಿಂದೀ ಬರೋದ್ರಿಂದ ಚಂದ್ರು ವಿಚಾರ ಸರಿಯಾಗಿ ಕೇಳಿ ತಿಳಿದುಕೊಳ್ಳಲಿ; ನಾಳೆ ಮತ್ತೆ ಸೇರಿ ಮಾತಾಡಿ ನಿರ್ಣಯಕ್ಕೆ ಬರೋಣ.

ಆದಿ:- ಹಸಿದ ಹೊತ್ತಿನಲ್ಲಿ ನುಸುಳಿಕೊಳ್ಳುವ ತಂತ್ರ ಇದು ಆಗಲಿ. ಈಗ ಈ ಪ್ರಸಂಗವನ್ನು ಮುಂದೆ ಹಾಕೋಣ. ನಾವು ಪುನಃ ಸೇರುವ ತನಕ ನೀವು ಮೂವರೂ ಯಾವ ಘರ್ಷಣೆಗೂ ಹೋಗಕೂಡದು. ಚಂದ್ರು, ಸಂಜೆ ನನ್ನ ಮನೆಗೆ ಬಾ ಅಲ್ಲಿ ಮಾತಾಡೋಣ. (ಎಲ್ಲರೂ ಚದರುವರು)

— ತೆರೆ —

## ನೋಟ ೪—ರಸ್ತೆಯಲ್ಲಿ

(ದೇವದಾಸ್ ಹಿಂದಕ್ಕೆ ತಿರುಗಿ ಯಾರನ್ನೋ ಉದ್ದೇಶಿಸಿ ಮಾತಾಡುತ್ತಾ ಬರುವನು)

ದೇವದಾಸ್:- ಇಲ್ಲೇ ಶೇಷಿ ಮನೆಗೆ ಹೋಗುತ್ತೇನೆ.... ಸಂಜೆಯೊಳಗೆ ಬಂದು ಬಿಡುತ್ತೇನೆ.... ಉಹುಂ.... ಅಲ್ಲೇ ಇರುವುದಿಲ್ಲ.... ಹಂ, ಹಂ ಆಗಲಿ.

ಚಂದ್ರು:- (ಆ ಕಡೆ ಈ ಕಡೆ ನೋಡುತ್ತಾ ದೇವದಾಸ್ ಹತ್ತಿರಕ್ಕೆ ಬಂದಾಗ ಅವರನ್ನೇ ದಿಟ್ಟಿಸುವನು)

ದೇವ:- (ಒಂದು ಕ್ಷಣ ಚಂದ್ರುವನ್ನೇ ಕುತೂಹಲದಿಂದ ನೋಡಿ ನಿಂತು) ಯಾರು ನೀವು?

ಚಂದ್ರು:- ನಾನು.... ಚಂದ್ರು; ಚಂದ್ರಕಾಂತ! ನೀವು?

ದೇವ:- ನನ್ನ ಹೆಸರು ದೇವದಾಸ್.... ಮಂಗಳೂರಿನವನು. ಇಲ್ಲಿ ಆದಿಮೂರ್ತಿ ಅಂತ ಇದ್ದಾರೆ ನೋಡಿ, ಅವರು ನನ್ನ ಅಳಿಯಂದಿರು.

ಚಂದ್ರು:- ಆದಿಮೂರ್ತಿ?

ದೇವ:- ಆದಿಮೂರ್ತಿ ಗೊತ್ತಿಲ್ಲವೋ? ನನ್ನ ಮಗಳ ಗಂಡ.... ಯಾಕೆ ಸ್ವಾಮಿ ನನ್ನ ಮುಖವನ್ನೇ ನೋಡುತ್ತೀರಿ?

ಚಂದ್ರ:- ಉಹುಂ.... ಇಲ್ಲ.... (ಸರಸರನೆ ಹೋಗುವನು)

ದೇವ:- ಅರೆ, ವಿಚಿತ್ರ ಮನುಷ್ಯ.

ಶೇಷಣ್ಣ:- (ಬರುತ್ತಾ) ಯಾರಯ್ಯಾ ವಿಚಿತ್ರ ಮನುಷ್ಯ?

ದೇವ:- ಇದೇ ಈಗ ಹೋದನಲ್ಲ....ಈ ಊರಿನವರು ಅಲ್ಲವೋ ಏನೋ? ನಮ್ಮ ಅಳಿಯನ ಮನೆಗೆ ಹೋದ. ಆಚೆ ಮನೆಗೆ ಬಾಡಿಗೆಗೆ ಬಂದವರೋ ಏನೋ? ಈವೊತ್ತೇ ಯಾರೋ ಹೊಸಬರು ಬಂದಿದ್ದಾರೆ ಎಂತ ನನ್ನ ಮಗಳು ಹೇಳಿದಳು.

ಶೇಷ:- ನಿಲ್ಲಿಸಿ ಕೇಳಬೇಕಾಗಿತ್ತು.

ದೇವ:- ನಿಲ್ಲಿಸಿ ಕೇಳಿದೆ; ಅರ್ಧಮರ್ಧ ಏನೋ ಹೇಳಿ ಸರಸರನೆ ಜಾರಿ ಹೋದ. ಚಂದ್ರು ಅಂತ ಅವನ ಹೆಸರು.

ಶೇಷ:- ಓ ಚಂದ್ರುವೇ! ಸರಿ ನನಗೆ ಗೊತ್ತು. ಬೆಳಿಗ್ಗೆ ಬಸ್ ಸ್ಟೇಂಡ್ ಹತ್ತಿರ ಒಂದು ಮನೆಯಲ್ಲಿ ಜಗಳ ಆಯ್ತಲ್ಲ! ಇವನೇ ಅದಕ್ಕೆ ಕಾರಣ. ನಿನ್ನ ಅಳಿಯಂದಿರೇ ಪಂಚಾಯತಿಗೆ ಹೋಗಿದ್ರಂತೆ. ಏನಾಯ್ತು ಕೇಳೋಣ ಅಂತ ಆದಿಮೂರ್ತಿ ಮನೆಗೆ ಹೊರಟಿದ್ದೆ. ಅಂದ ಹಾಗೆ ನಿನ್ನ ಆಗಮನ ಯಾವಾಗ ಆಯ್ತು?

ದೇವ:-ಇದೇ ಈವತ್ತು ಬೆಳಿಗ್ಗೆ ಒಂಭತ್ತು ಗಂಟೆಗೆ ಮೊಮ್ಮಕ್ಕಳನ್ನು ಬಿಟ್ಟು ಹೋಗುವ ಎಂತ ಬಂದೆ. ಮಧ್ಯಾಹ್ನ ಊಟ ಮುಗಿಸಿ ನಿನ್ನನ್ನೇ ಹುಡುಕಿಕೊಂಡು ಹೊರಟೆ. ಎಷ್ಟಾದರೂ ಒಂದು ಕಾಲದಲ್ಲಿ ಒಂದೇ ಕಡೆಯಲ್ಲಿ ಕೆಲಸ ಮಾಡಿದವರಲ್ಲವೋ ನಾವು? ಎಲ್ಲಾ ಕ್ಷೇಮ ತಾನೆ?

ಶೇಷ:- ಹೂಂ, ಸತ್ತಿಲ್ಲ ಅಂದ ಮೇಲೆ ಕ್ಷೇಮವೇ ಅನ್ನಬೇಕು.

ದೇವ:-ನಿನಗೇನಪ್ಪ ಅಂಥಾದ್ದು ಆದದ್ದು? ಮೊದಲು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಒದ್ದಾಡಿದರೂ ಈ ಒಳ್ಳೇ ಸುಭಿಕ್ಷದ ಊರಲ್ಲೇ ಇದ್ದಿ. ಇಲ್ಲಿ ಯಾವುದಕ್ಕೆ ಕೊರತೆ ಹೇಳು? ನಮ್ಮೂರಿನಲ್ಲಾದರೆ....

ಶೇಷ:-ನಮ್ಮೂರೇನು? ನಿಮ್ಮೂರೇನು? ಕೊರತೆ ಇರೋದು ಊರಿನಲ್ಲಲ್ಲ, ಮಂದಿಯಲ್ಲಿ. ಕೆಟ್ಟುಹೋಗಿರೋದು ನೆಲ ಅಲ್ಲ, ಕಾಲ.

ದೇವ:-ನೀನು ಹೇಳುವುದೇ ನನಗೆ ಗೊತ್ತಾಗುವುದಿಲ್ಲ. "ಚಿನ್ನದ ನಾಡಿದು ಮೈಸೂರು" ಎಂತ ಒಂದು ಪದ್ಯವೇ ಉಂಟು.

ಶೇಷ:-ಆ ಚಿನ್ನವೇ ಚಿನ್ನವಾಗಿ ಉಳಿಯಲಿಲ್ಲ; ಇನ್ನು ಚಿನ್ನ ಬೆಳೆಯೋದು ಎಲ್ಲಿ ಬಂತು? ಕೋಲಾರದಲ್ಲಿ ಗನಿ ಇದ್ದರೂ ಅಲ್ಲಿ ನಮ್ಮ ಧನಿ ಇಲ್ಲ.

ದೇವ:-ಅದೂ ಬೇಡ; ಒಳ್ಳೆಯ ಮಣ್ಣು ಇಲ್ಲವೋ?

ಶೇಷ:-ಮಣ್ಣನ್ನು ಯಾರಾದರೂ ತಿನ್ನುತ್ತಾರೆಯೋ? ಅದೇ ಅಂತಹ ಪರಿಸ್ಥಿತಿ ಬಂದಿಲ್ಲ ಎಂದೆ. ಹೀಗೇ ಮುಂದುವರಿದರೆ ಆ ಕಾಲವೂ ದೂರ

ದಲ್ಲಿಲ್ಲ. ನಾಗರಿಕತೆಯ ಮೋಹದಲ್ಲಿ ಮಂದಿಗೆ ಕೆಸರು ಬೇಕಾಗಿಲ್ಲ.
ಅದಕ್ಕೇ ಮೊಸರು ಇಲ್ಲವಾಗಿದೆ.

ದೇವ:-ಒಗಟು ಹೇಳುತ್ತಾ ಇದ್ದೀಯೋ ಏನು?

ಶೇಷ:-ಇದು ಒಗಟಲ್ಲ, ಕಾಲಾತೀತವಾದ ಸತ್ಯ. ಇಂದಿನ ವಿದ್ವಾಂಸರ
ಬೋಧೆಗಳಿಗಿಂತ, ಹಿಂದಿನ ಹೆಡ್ಡರ ಗಾದೆಗಳು ಕಳೆದುದಕ್ಕೆ ಆಧಾರ;
ಬೆಳೆಯುವುದಕ್ಕೆ ಆದರ್ಶವಾಗಿವೆ. ನಾವು ಹಳೆಯದನ್ನು ಬಿಟ್ಟೆವು,
ಹೊಸತಿನಿಂದ ಕೆಟ್ಟೆವು ಈಗ ಮರ ಬಿಟ್ಟ ಮಂಗನಂತಾಗಿದೆ ನಮ್ಮ
ಪಾಡು. ನಮ್ಮದೇ ಎಂದೇನು? ಇಡೀ ಭಾರತದ ಪಾಡೇ ನಾಯಿ
ಪಾಡಾಗಿದೆ. ಯಾಕೇಂತ ಕೇಳು....

ದೇವ:-ನಾನು ಕೇಳದೇ ಇದ್ದರೂ ನೀನು ಹೇಳುತ್ತೀ ಎಂದು ನನಗೆ ಗೊ
ತ್ತುಂಟು. ಪೂಜಾರಿ ಮೈಯಲ್ಲಿ ದೇವತೆ ಬಂದ ಹಾಗೆ ನಿನಗೆ ಭಾಷಣ
ಪಿಶಾಚಿ ಹಿಡಿದಿದೆ. ಯಾರೂ ಯಾವ ಸಮಾರಂಭಕ್ಕೂ ಕರೆಯು
ಲಿಲ್ಲವೋ ಏನೋ? ಅದಕ್ಕೆ ಮಾರ್ಗದಲ್ಲಿ ದನಿಯೇರಿಸಿ ಭಾಷಣ
ಸುರುಮಾಡಿದ್ದೀ. ಸ್ವಲ್ಪ ಹೊತ್ತಿನಲ್ಲಿ ಡೊಂಬರಾಟಕ್ಕೆ ಜನ ಕೂಡಿದ
ಹಾಗೆ ಇಲ್ಲಿಯೂ ಸೇರುತ್ತಾರೆ. ಅವರೇ ಕೇಳುತ್ತಾರೆ ಈ ಮನ ಷ್ಯ
ಯಾಕೆ....

ಶೇಷ:-ಹುಚ್ಚನಾಗಿದ್ದಾನೆ ಎಂತ. ಈಗಿನ ಓದಿದ ಮಂದಿಯ ಭವಿಷ್ಯವೇ
ಇದು ಎಂದು ಬಿಡು. ಅದಕ್ಕೇ ನಮ್ಮ ಮುಂದಾಳುಗಳು 'ಹುಚ್ಚು'
ಇರಬೇಕೂಂತ ಹೇಳತೊಡಗಿದ್ದಾರೆ. ದೇಶಕ್ಕೆ ಕಿಚ್ಚು ಹತ್ತಿದಾಗ
ದೇಶವಾಸಿಗಳಿಗೆ ಒಂದೊಂದು ಹುಚ್ಚು ಹತ್ತಿದರೆ ನಂದಿಸುವುದಕ್ಕೆ
ಯಾರಾದರೂ ಬರುತ್ತಾರೆ. ದಾಸ್ಯ ಹೋದರೂ ದಾಸ್ಯಭಾವನೆ
ಬಿಟ್ಟಿಲ್ಲ ನೋಡು.

ದೇವ:-ನಾನೊಂದು ಮಾತು ಹೇಳುತ್ತೇನೆ ಕೇಳುವೆಯಾ?

ಶೇಷ:-ನನ್ನ ವಾಕ್ ಪ್ರವಾಹಕ್ಕೆ ತಡೆ ಹಾಕಬೇಕಾಗಿದೆ ನಿನಗೆ! ಹಾಂ,
ಹೇಳು.

ದೇವ:-ಒಂದು ರೀತಿಯಿಂದ ಹೌದು; ಮಾರ್ಗದಲ್ಲಿ ಇಷ್ಟು ಉದ್ದವಾದ ಮಾತುಗಳನ್ನು ಆಡಬಾರದು. ವಯಸ್ಸಾಗುತ್ತಾ ಉಪದೇಶದ ಹುಚ್ಚು, ಟೀಕೆಯ ಚಾಳಿ ಶುರುವಾಗಿದೆ ನಿನಗೆ.

ಶೇಷ:-ಇಷ್ಟೇ ತಾನೇ ನೀನು ಹೇಳೋದು.

ದೇವ:-ಇಷ್ಟು ಮಾತ್ರವಲ್ಲ; ಊರಿಗೊಂದು ದಾರಿಯಾದರೆ ಪೋರನಿಗೆ ಇನ್ನೊಂದು ದಾರಿ ಆಗಬಾರದು.

ಶೇಷ:-ಗುಂಪಿನಲ್ಲಿ ಗೋವಿಂದ ಎನ್ನಬೇಕು ಅಲ್ಲವೇ? ಅದಕ್ಕೇ ಈಗ 'ಸಂಪುಗಳೇ' ಆಗುತ್ತಿರೋದು. ಸ್ವಾತಂತ್ರ್ಯಕ್ಕಾಗಿ ಆರಂಭವಾದ ಸತ್ಯಾಗ್ರಹ ಸ್ವಾತಂತ್ರ್ಯದ ದುರುಪಯೋಗಕ್ಕಾಗಿ ಆಗತೊಡಗಿದೆ. ದನಿ ಇದ್ದವರೆಲ್ಲಾ 'ಧಣಿ' ಆಗುತ್ತಾರೆ.

ದೇವ:-ನಮ್ಮ ಅಳಿಯನೂ ಇದನ್ನೇ ಹೇಳುತ್ತಾನೆ.

ಶೇಷ:-ಬುದ್ಧಿ ಇದ್ದವರೆಲ್ಲಾ ಹೇಳಿಯೇ ಹೇಳುತ್ತಾರೆ.

ದೇವ:-ಹೇಳುವುದೇ ಬುದ್ಧಿವಂತಿಕೆಯೋ ಹಾಗಾದರೆ? (ಪಕ್ಕಕ್ಕೆ ತಿರುಗಿ) ನೋಡು ಅಲ್ಲಿ ಆ ಹುಡುಗ ಏನೋ ಹೇಳುತ್ತಾ ಇದ್ದಾನೆ. ಅವ ನನ್ನು ಬುದ್ಧಿವಂತ ಎನ್ನಬಹುದೋ?

ಉದಯು:-(ಒಳಗಿನಿಂದಲೇ ಕೂಗುತ್ತಾ ಬರುವನು) ಧಿಕ್ಕಾರ! ಹಿಂದಿಗೆ ಧಿಕ್ಕಾರ! ಖಡ್ಡಾಯ ಶಿಕ್ಷಣಕ್ಕೆ ಧಿಕ್ಕಾರ! ಹಿಂದೀ ಭಾಷೆ ಜಿಂದಾಬಾದ್, ಇಂಕ್ವಿಲಾಬ್, ಜಿಂದಾಬಾದ್. ಏನೇ ಬರಲಿ, ಒಗ್ಗಟ್ಟಿರಲಿ.... ತೆರಿ ಪ್ಯಾರೀ ಪ್ಯಾರೀ ಸೂರತ್ ಕೋ ಕಿಸೀಕಿ ನಜರ್ ನಾ ಲಗೇ.

ದೇವ:-ಏ ಹುಡುಗ ಬಾರೋ ಇಲ್ಲಿ.

ಉದಯು:-(ಒರಟಾಗಿ) ಏನು ನನಗೆ ಟೇಮ್ (Time) ಇಲ್ಲ.

ಶೇಷ:-ಪಾಪ! ಟೇಮ್ (Tame) ಹೇಗಿದ್ದೀತು? ಆಟಕ್ಕೆ ಹೊತ್ತಾಯ್ತು ಅಂತ ಕಾಣುತ್ತೆ.

ಉದಯು:-ಈವೊತ್ತು ಆಟ ಇಲ್ಲ. ಟಾಕೀಸ್ ಮುಂದೆ ಪಿಕೆಟ್ ಮಾಡ್ತೀವಿ.

ದೇವ:-ಯಾರು?

ಉದಯ:-ನಾವು ಸ್ಟೂಡೆಂಟ್ಸ್. ಪರದೇಶೀ ಹಿಂದೀ ಪಿಕ್ಚರ್ ನಡೀತಾ ಇದೆ.

ಶೇಷ:-ಟಾಕೀಸ್‍ನಲ್ಲಿ ನಡೆಯುವ ಹಿಂದೀ ಚಿತ್ರಕ್ಕೂ ನಿಮಗೂ ಏನು ಸಂಬಂಧ?

ಉದಯ:-ಸಂಬಂಧ ಇಲ್ಲದ್ದಕ್ಕೇ ಗಲಾಟೆ ಮಾಡೋದು. ಸ್ಕೂಲಿನಲ್ಲಿ ಹಿಂದಿ ಕಂಪಲ್ಸರಿ ಮಾಡಿರೋದನ್ನು ಪ್ರತಿಭಟಿಸುವುದಕ್ಕಾಗಿ ಎಲ್ಲಾ ಕಡೆಯೂ ಹಿಂದೀ ವಿರೋಧ ಮಾಡ್ಬೇಕೂಂತ....

ದೇವ:-ಒಳ್ಳೆಯ ವಿಧಾನವನ್ನೇ ಅನುಕರಿಸಿದ್ದೀರಿ. ಏನಪ್ಪಾ ಹಿಂದೀ ನಮ್ಮ ರಾಷ್ಟ್ರಭಾಷೆ ಅಲ್ಲವೋ?

ಉದಯ:-ಇದು ನಮ್ಮ ಮೇಲಿನ ದಬ್ಬಾಳಿಕೆ. ಈಗ ಇದ್ದದ್ದನ್ನೇ ಕಲಿಯೋಕೆ ಆಗಲಿಲ್ಲ. ನಾವು ಪಾಸ್ ಆಗ್ಬೇಕೋ ಬೇಡವೋ?

ಶೇಷ:-ಹೀಗೆಲ್ಲಾ ಚಳುವಳಿ ಮಾಡಿದೆ, ಪಾಸಾಗುತ್ತೀನಯ್ಯ?

ಉದಯ:-ಪಾಸ್ ಮಾಡದಿದ್ರೆ ಅನ್ನ ಸತ್ಯಾಗ್ರಹ ಮಾಡ್ತೀವಿ. ಶಾಲೆಗೇ ಬೆಂಕಿ ಹಚ್ತೀವಿ! ಮೇಷ್ಟ್ರುಗಳನ್ನು ಬಲಿ ಹಾಕ್ತೀವಿ! (ಹೋಗುವನು)

ದೇವ:-ಹುಂ, ದೇವರೇ ಗತಿ ನಮ್ಮ ದೇಶಕ್ಕೆ!

ಶೇಷ:-ಯಾಕೆ? ಮುಂದಿನ ಪ್ರಜೆಗಳ ತಯಾರಿ ಚಂದವಾಗಿದೆ ಅಲ್ಲವೇ?

ದೇವ:-ಅದನ್ನೇ ಯೋಚಿಸುತ್ತಿದ್ದೇನೆ.

ಶೇಷ:-ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲಾ ಬರುತ್ತೆ ಕಣೋ! ಈ ಹುಡುಗ ಯಾರು ಗೊತ್ತೆ?

ದೇವ:-ನಿನಗೆ ಗೊತ್ತುಂಟೋ?

ಶೇಷ:-ಮಾತಾಡಿ ಗೊತ್ತಿಲ್ಲದಿದ್ದರೂ ಕೇಳಿ ಗೊತ್ತಿದೆ. ಸ್ಕೂಲ್ ಲೀಡರ್ ಕಿರಿಯ ಪುಢಾರಿ. ಈಗ ಸ್ವಲ್ಪ ಮೊದಲು ಹೋದ ಎಂದೆಯಲ್ಲ.... ಅವನ ತಮ್ಮ 'ಉದಯ' ಎಂತ.

ದೇವ -ಉದಯ! ಸರಿಯಾದ ಹೆಸರು. ನಮ್ಮ ಮುಂದಿನ ಜನಾಂಗದ ಸಂಕೇತ ಇವನು.

ಶೇಷ;-ಅಷ್ಟು ಗೊತ್ತಾದರೆ ಸಾಕು, ನಮ್ಮ ದೇಶದ ಭವಿಷ್ಯವನ್ನು ಇಷ್ಟರಿಂದಲೇ ಊಹಿಸಬಹುದು. ನಮ್ಮ ಮುಂದಿನವರು ಈ ರೀತಿ ತಯಾರಾಗ್ತಾ ಇದ್ದಾರೆ. ಇವನ ಹಿರಿಯರು ಪಕ್ಷಪಂಗಡ ಕಟ್ಟಿ ತಮ್ಮ ಲಾಭ ಅಧಿಕಾರಕ್ಕಾಗಿ ಜಗಳಾಡ್ತಿದ್ದಾರೆ. ಈ ಹುಡುಗ ದೇಶದಲ್ಲೇ ಪರದೇಶಿಯಾದಂತೆ ದಾರಿ ತಪ್ಪಿದ್ದಾನೆ. ಸೋಮಾರಿತನವನ್ನು ಬೆಳೆಸುವ ಮಾರಕ ಚಟುವಟಿಕೆಗಳು ಇಂಥವರನ್ನು ಸಹಜವಾಗಿ ಆಕರ್ಷಿಸುತ್ತವೆ. ವೈಯಕ್ತಿಕ ಪ್ರತಿಷ್ಠೆಗೆ ಹೊರಟಿರುವ ಪಂಗಡದ ಮುಖಂಡರು ಇಂತಹ ಮುಗ್ದರನ್ನು ಪುಂಡಾಟಿಕೆಗೆ ಉಪಯೋಗಿಸುತ್ತಾರೆ. ಪ್ರತಿಯೊಂದು ಗಲಭೆಗೆ ಶಾಲೆಯ ಮಕ್ಕಳನ್ನೇ ಊರಮುಂದಿ ಎಳೆಯುತ್ತಾರೆ. ಇದರ ಪರಿಣಾಮ ಇದು. ಏನೂ ಗೊತ್ತಿಲ್ಲದ ಈ ತಬ್ಬಲಿಗಳು ರಂಪ, ಸಂಪುಗಳನ್ನೇ ಕಲಿಯುತ್ತವೆ.

ದೇವ:-ಅದು ನಿಜ, ಹಿಂದಿ ಬೇಡ ಎಂದ, ಹಿಂದಿ ಜಿಂದಾಬಾದ್ ಎಂದ. ಹಿಂದೀ ಚಿತ್ರಕ್ಕೆ ಬಹಿಷ್ಕಾರವಂತೆ, ಹಿಂದೀ ಗೀತೆಯನ್ನೇ ಗೊಣಗುತ್ತಿದ್ದಾನೆ. ಒಟ್ಟಾರೆ ಎಲ್ಲವೂ ವಿರೋಧಾಭಾಸ (ದೂರದಲ್ಲಿ ಯಾರನ್ನೋ ನೋಡತೊಡಗುತ್ತಾನೆ)

ಶೇಷ;-ಕೃತ್ರಿಮವೆಲ್ಲವೂ ವಿರೋಧಾಭಾಸವೇ. ಈ ಅಸಹಜತೆ ಹೋಗಬೇಕಾದರೆ ಸಹಜವಾದ ಐಕ್ಯ ಮೂಡಬೇಕು. ಅದನ್ನು ಹುಡುಕುವ, ಮತ್ತೆ ರೂಢಿಸುವ ಕಾಲ ಬಂದಿದೆ ಈಗಿನವರಿಗೆ ಅರ್ಥ ತಿಳಿಯದಿದ್ದರೂ ಕೂಗಬೇಕು ಎನ್ನುವುದಷ್ಟು ಗೊತ್ತು. ಹೇಳುತ್ತಾರಲ್ಲ.... "ಯೇನಕೇನ ಪ್ರಕಾರೇಣ ಪ್ರಸಿದ್ಧ ಪುರುಷೋ ಭವ" ಎಂದು ಏನು ಆ ಕಡೆ ನೋಡುತ್ತಾ ಇದ್ದೀ.

ದೇವ;-ಅಲ್ಲಿ ಇಬ್ಬರು ಹೆಂಗಸರು ಹೋಗುತ್ತಿದ್ದಾರೆ.

ಶೇಷ;-ನಿನಗೆ ಯಾವಾಗಲೋ ಈ ಬೀದಿ ಹೆಂಗಸರ ಗೀಳು ಹತ್ತಿದ್ದು?

ದೇವ:-ಛಿ! ಛಿ! ಅಷ್ಟು ಹಗುರವಾಗಿ ಮಾತಾಡಬಾರದು, ಇತರರನ್ನು

ಟೀಕಿಸಿ ಉಪದೇಶಿಸುವ ನೀನು ಸಹ ದೀಪದ ಕೆಳಗೆ ಕತ್ತಲೆ ಯಾಗುತ್ತೀ.

ಶೇಷ:-ಏನಾಯ್ತೋ ನಿನಗೆ? ಯಾರು ಆಕೆ?

ದೇವ:-ನೋಡಿ ಹೇಳುತ್ತೇನೆ. 'ಮಮತಾ....ಮಮತಾ' (ಕರೆಯುತ್ತಾ ಹೋಗುವನು)

ಶೇಷ:-[ಅವನನ್ನೇ ದಿಟ್ಟಿಸಿ ನಿಟ್ಟುಸಿರಿಟ್ಟು ಆ ಕಡೆಗೇ ಹೋಗುವನು]

— ತೆರೆ —

## ನೋಟ ೫

[ಮೊದಲ ದೃಶ್ಯದಲ್ಲಿ ಹೇಳಿದ ಆದಿಮೂರ್ತಿಯ ಮನೆ, ಬಾಗಿಲು ತೆರೆದು ಬಂದ ಮಾಯಾವತಿ ಅಡ್ಡ ಗೋಡೆ ಹಿಡಿದು ಪಕ್ಕದ ಮನೆ ಬಾಗಿಲ ಕಡೆ ನೋಡುತ್ತಾ ಇದ್ದಾಳೆ]

ಆದಿಮೂರ್ತಿ:-(ಒಳಗಿಂದ ಬರುತ್ತಾ) ಏನೇ? ಎಲ್ಲಿ ಹೋದಿಯೇ? ಓ, ಗೋಡೆ ಹಾರೋದಕ್ಕೆ ಹವಣಿಸ್ತಿದ್ದಿಯೇನು?

ಮಾಯಾವತಿ:-ನಾ ಯಾಕೆ ಗೋಡೆ ಹಾರಲಿ? ಈ ಕಡೆ ಬಂದವಳು ಸಹಜ ವಾಗಿ ಆ ಕಡೆ ನೋಡಿದೆ ಅಷ್ಟೇ. ಹೊಸತಾಗಿ ಬಾಡಿಗೆಗೆ ಬಂದ ವರು ಎಂಥವರೊಂತ.

ಆದಿ:-ಪತ್ತೇದಾರಿ ಶುರು ಮಾಡ್ದೆ ಅನ್ನು. ನಾನು ಕಾಫಿಗೆ ಸಕ್ರೆ ಹಾಕೊಂತೀನಿ; ನೀನು ಸಕ್ಕರೆ ಹಂಚೋದಕ್ಕೆ ನೆರಮನೆಗೆ ಹೊರಟಿದ್ದೀ. ನಾನು ಒಳಗೆ ಕೂಗಿದ್ದೇ ಕೂಗಿದ್ದು. ಕೊನೆಗೆ ಕಹಿ ಕಾಫಿಯನ್ನೇ ಮುಖ ಕಹಿ ಮಾಡ್ಕೊಂಡು....

ಮಾಯಾ:-ಬಿಟ್ಟು ಬಂದ್ರೇನು?

ಆದಿ:-ಉಹುಂ, ಕಣ್ಣುಮುಚ್ಚಿ ಕುಡಿದೇ ಬಿಟ್ಟೆ. ಅಷ್ಟರಲ್ಲೇ ನೀನು ಕಣ್ಮರೆ ಯಾಗಿರೋದು ತಿಳಿದು ಹುಡುಕುತ್ತಾ ಹೊರಟೆ; ಸೀತೆಯನ್ನು ಕಳ ಕೊಂಡ ರಾಮನ ಹಾಗೆ,

ಮಾಯಾ:-ಅಂದ್ರೆ ನಾನು ಕಳೆದುಹೋದೆ ಎಂತ಼್ಲೇ?

ಆದಿ:-ಯಾಕಾಗಬಾರದು? ಸೀತೆ ಭಿಕ್ಷೆ ಕೊಡೋದಕ್ಕೆ ಆಶ್ರಮದ ಬಾಗಿಲಿಗೆ ಬಂದಾಗ ರಾವಣಾಸುರನು ಹೊತ್ಕೊಂಡು ಹೋಗಲಿಲ್ವೆ? ನೀನೂ ಒಬ್ಬಳೇ ಹೊರಗೆ ಬಂದಿದ್ದೀ; ಮಕ್ಕಳು, ಮಕ್ಕಳ ತಂದೆ ಎಲ್ಲರೂ ಒಳಗಿದ್ದಾರೆ. ಹೊರಗಿನಿಂದ ಯಾರಾದರೂ....

ಮಾಯಾ:-ಓಹೋ, ಇದ್ದವಳನ್ನು ಮರೆತು ಇನ್ನೊಬ್ಬಳನ್ನು ತರುವ ಯೋಚನೆ!

ಆದಿ:-ತರೋದಕ್ಕೆ ಸಾಧ್ಯವಿಲ್ಲ ಎಂದ ಮೇಲೆ ಆ ಯೋಚನೆ ಏನು ಬಂತು? ಅದಕ್ಕಾಗಿಯೇ ಎಂತವಳೇ ಇರಲಿ, ಇದ್ದವಳನ್ನು ಕಳಕೊಳ್ಳಬಾರದೆಂದು ಹುಡುಕುತ್ತಾ ಬಂದೆ.

ಮಾಯಾ:-ಸಾಕು ನಿಮ್ಮ ಸರಸ, ಅಪ್ಪ ಬಂದು ಬಿಡುತ್ತಾರೆ ಈ ಕಡೆಗೆ. ಒಂದಿಷ್ಟು ಹೆದರಿಕೆ ಇಲ್ಲ ನಿಮಗೆ.

ಆದಿ:-ನಾಲ್ಕು ಮಕ್ಕಳಾದ ಮೇಲೆ ಇನ್ನೆಂಥಾ ಹೆದರಿಕೆಯೇ? ನಿನ್ನ ತಂದೆಗೆ ಸಂತೋಷವೇ ಆಗುತ್ತೆ ಅಳಿಯ ಮಗಳು ಅನ್ಯೋನ್ಯ ಇದ್ದಾರೇಂತ. ಅಂದ ಹಾಗೆ ನಿನ್ನೆ ಅವರಿಗೆ ಯಾರಂತೆ ಸಿಕ್ಕಿದ್ದು?

ಮಾಯಾ:-ನಿಮ್ಮ ಕೂಡ ಹೇಳಿಲ್ಲವೇ?

ಆದಿ:-ನಾನು ಬಂದಾಗ ನಿನ್ನ ಕೂಡ ಹೇಳುವುದನ್ನೂ ನಿಲ್ಲಿಸಿ ಬಿಟ್ಟರು. ಮತ್ತೆ ನನಗೆ ಹೇಗೆ ಗೊತ್ತಾಗಬೇಕು? ಕದ್ದು ಕಿವಿಗೆ ಬಿದ್ದದ್ದು ಎಷ್ಟೋ ಅಷ್ಟೇ ಗೊತ್ತು.

ಮಾಯಾ:-ಇದರಲ್ಲಿ ಅಂತರಂಗವೇನೂ ಇಲ್ಲ, ಮರೆತ ದುಃಖ ಅವರಿಗೆ ಮರುಕಳಿಸಿದೆ!

ಆದಿ:-ಅಂದರೆ?

ಮಾಯಾ:-ನನ್ನ ತಂಗಿ....

ಆದಿ:-ನಿನಗೂ ಒಬ್ಬ ತಂಗಿಯಿದ್ದಾಳೆಯೇ?

ಮಾಯಾ:-ಇಲ್ಲಾಂತ ಎಲ್ಲರೂ ಮರೆತಿದ್ದೆವು. ನಿನ್ನೆ ಸಂಜೆ ಯಾರೋ ಆಕೆಯ ಹಾಗೆ ಕಾಣಿಸಿದರಂತೆ! ಹಾಗೆ ಹೆಸರು ಹಿಡಿದು ಕೂಗುತ್ತಾ ಹೋದರೆ ಅವರು ಯಾವುದೋ ಮನೆಯೊಳಕ್ಕೆ ಹೋಗಿ ಬಿಟ್ಟರಂತೆ ಅಲ್ಲಿಗೆ ಹೋಗಲಾರದೆ ಹಿಂದಕ್ಕೆ ಬಂದು ನನ್ನಲ್ಲಿ ದುಃಖ ತೋಡಿ ಕೊಂಡರು. ಇಂದು ನಸುಕಿನಲ್ಲಿ ಮತ್ತೆ ಆ ಕಡೆ ಹೋಗಿದ್ದಾರೆ.

ಆದಿ:-ಎಲ್ಲಿ ಏನೂಂತ ನನಗೆ ಹೇಳಿದ್ದರೆ ನಾನು ಹುಡುಕಿ ಹಿಡಿಯುತ್ತಿದ್ದೆ.

ಮಾಯಾ:-ನಿಮ್ಮೊಡನೆ ಹೇಳುವುದಕ್ಕೆ ಅವರಿಗೆ ಸಂಕೋಚವಾಯ್ತೋ ಏನೋ. ಒಂದು ವೇಳೆ ತನಗೆ ಭ್ರಾಂತಿಯಾಗಿದ್ದರೇಂತ ಹಿಂಜರಿದರು

ಆದಿ:-ಇದರಲ್ಲಿ ಭ್ರಾಂತಿಯೇನು?

ಮಾಯಾ:-ಹದಿನೇಳು ವರ್ಷದ ಹಿಂದೆ ಬಿಹಾರದಲ್ಲಿ ಕಳೆದು ಹೋದವಳು. ಈ ಊರಿನಲ್ಲಿ ಈಗ ಕಾಣಿಸಿಕೊಳ್ಳುವುದೆಂದರೆ ಯಾರಾದರೂ ಹುಚ್ಚು ಎಂದಾರು.

ಆದಿ:-ಆಂ! ನನಗೆ ಈ ವಿಚಾರ ಒಂದೂ ಗೊತ್ತಿಲ್ಲವಲ್ಲ. ನಿನ್ನ ತಂದೆಯೂ ಇಷ್ಟರ ತನಕ ಹೇಳಿದ್ದಿಲ್ಲ, ನೀನೂ ಈ ಬಗ್ಗೆ ಮಾತನಾಡಿಲ್ಲ.

ಮಾಯಾ:-ಯಾಕೋ ಸಂದರ್ಭ ಸಿಗಲಿಲ್ಲ.

ನೂತನ:-(ಕಣ್ಣು ಹಿಚುಕುತ್ತಾ ಬಂದು) ಅಮ್ಮಾ ಅಜ್ಜ ಎಲ್ಲಿಗೆ ಹೋದರು?

ಆದಿ:-ಅಜ್ಜ ಮಂಗಳೂರಿಗೆ ಹೋದರು. ಮೊಮ್ಮಗನಿಗೆ ಹೇಳದೆ ಹೊರಟೇ ಹೋದರು.

ನೂತನ:-ಹೌದೇನಮ್ಮಾ?

ಮಾಯಾ:-ಇಲ್ಲ ಕಣೋ, ಇಲ್ಲೇ ಎಲ್ಲೋ ತಿರುಗಾಟಕ್ಕೆ ಹೋಗಿದ್ದಾರೆ.

ನೂತನ:-ಅಪ್ಪ ನೀನು ಸುಳ್ಳು ಹೇಳುತ್ತಿ. ನನಗೆ ಮಾತ್ರ ಸುಳ್ಳು ಹೇಳಿದರೆ ತೊಗಲು ಸುಲಿಯುತ್ತೇನೆ ಎನ್ನುತ್ತೀ.

ಮಾಯಾ:-ನಿನ್ನ ಅಪ್ಪನ ತೊಗಲು ಸುಲಿಯುವವರು ಯಾರೂ ಇಲ್ಲ. ಅದಕ್ಕೇ ಸುಳ್ಳು ಹೇಳುತ್ತಾರೆ. (ಒಳಗೆ ಹೋಗುವಳು)

ಆದಿ:–ನಾನು ಸುಳ್ಳು ಹೇಳಿಲ್ಲ ಕಣೋ. ನಿನ್ನ ಅಜ್ಜನಿಗೆ ಬೆಳಬೆಳಗ್ಗೆ ಸಿಟ್ಟು ಬಂತು.... ನೂತನ ಎದ್ದಿಲ್ಲಾಂತ! ಅದಕ್ಕೇ ಯಾರಿಗೂ ಹೇಳದೇ ಹೋಗಿದ್ದಾರೆ.

ನೂತನ:– (ಒಳಗಡೆ ಇಣಿಕಿ) ಇಲ್ಲ; ಅಜ್ಜನ ಕೋಟು ಗೂಟದ ಮೇಲೆ ಇದೆ.

ಆದಿ:–(ನೋಡಿ) ಓಹೋ ಕೋಟು ಮರೆತೇ ಹೋಗಿದ್ದಾರೆ. ಹಾಗಿದ್ದರೆ ಪುನಃ ಬಂದೇ ಬರುತ್ತಾರೆ.

ನೂತನ:–ಎಲ್ಲಾ ಸುಳ್ಳು, ದೊಡ್ಡೋರು ಹೇಳೋದೇ ಸುಳ್ಳು ಬರೀ ಸುಳ್ಳು.

ದೇವ:–(ಬರುತ್ತಾ) ಯಾವುದು ಸುಳ್ಳೋ?

ನೂತನ:–ನಮ್ಮಪ್ಪ ಹೇಳಿದ ನೀವು ಮಂಗಳೂರಿಗೆ ಹೋದಿರಂತೆ.

ದೇವ:– ಹೋಗಬೇಕು ಎಂತ ಮಾಡಿದ್ದೆ; ಆದರೆ....

ನೂತನ:–ಬಸ್ಸೆ ಇಲ್ಲ. ಮಧ್ಯಾಹ್ನಕ್ಕೆ ಮೊದಲು ಮಂಗಳೂರಿಗೆ ಯಾವ ಬಸ್ಸೂ ಹೋಗೋದಿಲ್ಲ. ನೀವೂ ಸುಳ್ಳು ಹೇಳುತ್ತೀರಿ.

ಆದಿ:–ಹೋಗು ಹೋಗೋ! ಹಿರಿಯರನ್ನು ಹೀಯಾಳಿಸಬಾರದು. ಒಳಗಿನಿಂದ ಕುರ್ಚಿ ತಂದು ಹಾಕು, ಅಜ್ಜ ಕುಳಿತುಕೊಳ್ಳಲಿ.

ನೂತನ:–ಯಾವ ಕುರ್ಚಿ? ಆ ದೊಡ್ಡದನ್ನು ನನಗೆ ಎತ್ತೋಕೆ ಆಗೋಲ್ಲ, ಸಣ್ಣದು ಅಜ್ಜನಿಗೆ ಸಾಕಾಗೋಲ್ಲ.

ಆದಿ:–ನಿನ್ನ ಕೈಯಲ್ಲಿ ಏನೂ ಆಗೋದಿಲ್ಲಾನ್ನು. (ಒಳಗೆ ಹೋಗುವಳು)

ದೇವ:–ಕುರ್ಚಿ ಬೇಡ; ಈ ಜಗಲಿಯ ನೆಲ ಚೆನ್ನಾಗಿದೆ.

ಆದಿ:–(ಕುರ್ಚಿ ತರುತ್ತಾ) ನೆಲದ ಮೇಲೆ ಕುಳಿತು ನಮಗೆ ಅಭ್ಯಾಸವಿಲ್ಲ. ಹುಂ ಕುಳಿತುಕೊಳ್ಳಿ.

ದೇವ:–ನಿನಗೆ ಮತ್ತೆ?

ಆದಿ:– ಇನ್ನೊಂದನ್ನು ತರುತ್ತೇನೆ.

ದೇವ: ಸುಮ್ಮನೆ ಹೊರುವ ಪರಿಶ್ರಮ. (ಕುಳಿತುಕೊಳ್ಳುವಳು)

ಆದಿ:– ಅಗುತ್ತೆ ಏನು ಮಾಡೋಣ? ರಾತ್ರಿಯು ಹೊತ್ತು ಹೊರಗಡೆ ಕುರ್ಚಿ ಇಡುವ ಹಾಗಿಲ್ಲ, ಹಗಲು ಒಳಗಡೆ ಕುಳಿತುಕೊಳ್ಳುವ ಹಾಗಿಲ್ಲ. ಮನಸ್ಸೇನೊ ದೊಡ್ಡದು. ಮನೆ ಮಾತ್ರ ಸಣ್ಣದಾಗಿ ಹೋಯ್ತು (ಒಳಗೆ ಹೋಗಿ ಕುರ್ಚಿ ತರುವನು)

ನೂತನ;– ಮನೆಗಿಂತ ಮನಸ್ಸು ಹೆಚ್ಚು; ಮನಸ್ಸಿಗಿಂತ ಮಾತು ಹೆಚ್ಚು.

ಆದಿ:– (ಏಟು ಕೊಡುತ್ತಾ) ಮಾತಿಗಿಂತ ಕೃತಿ ಹೆಚ್ಚು. ಅಧಿಕ ಪ್ರಸಂಗಿ, ಹಿರಿಯರ ಮಾತಿನಲ್ಲಿ ಬಾಯಿ ಹಾಕಬಾರದೆಂದು ಎಷ್ಟು ಹೇಳಿದರೂ ತಿಳಿಯುವುದಿಲ್ಲ.

ನೂತನ;– (ಕೋಪ-ದುಃಖದಿಂದ) ಕುರ್ಚಿ ತರೋದಕ್ಕೆ ಮಾತ್ರ ನಾನು ಬೇಕಾಗಿತ್ತು.

ಆದಿ:– ನೀನು ಅದನ್ನೂ ತಂದಿಲ್ಲವಲ್ಲ. ಈಗ ಎದುರು ಬೇರೆ ವಾದಿಸುತ್ತೀ! ನಡೀ ಒಳಗೆ. ಶಾಲೆಗೆ ರಜಾ ಆದ್ರೂ ಓದೋದನ್ನ ಬಿಡ್ಬೇಕೂಂತೇನೂ ಇಲ್ಲ.

ದೇವ:– ಹೋಗಪ್ಪಾ ಹೋಗಿ ಓದಿಕೋ.

ನೂತನ:– ಓದೋದಕ್ಕೆ ಪುಸ್ತಕವೇ ಇಲ್ಲ. ಹಳೇವು ಹಾಳಾಗಿವೆ, ಹೊಸವು ಇನ್ನೂ ಬಂದಿಲ್ಲ.

ಆದಿ:– ಈ ಕಾಲಕ್ಕೆ ಇದೊಂದು ಬೇರೆ ಕೇಡು. ಒಂದು ಪುಟ ಪಾಠ ಬರಿ.

ನೂತನ:– ಯಾವ ಪಾಠ?

ಆದಿ;– ಯಾವುದಾದರೂ ಒಂದು; ಅವಿವೇಕಿ! (ಒಳಗೆ ದಬ್ಬುವನು) ಈಗಿನ ಮಕ್ಕಳಿಗೆ ವಿಧೇಯತೆ ಅನ್ನುವುದೇ ಗೊತ್ತಿಲ್ಲ. ಶಾಲೆಗಳಲ್ಲಿ ಅದೇನು ಹೇಳಿ ಕೊಡ್ತಾರೊ?

ದೇವ;– ಹಡೆದು ಕಾಪಾಡುವ ತಾಯಿತಂದೆಗಳಿಗೇ ಮಕ್ಕಳಿಗೆ ಹೇಳುವುದಕ್ಕೆ ಆಗುವುದಿಲ್ಲ ಮತ್ತೆ ಹೊಟ್ಟೆಪಾಡಿಗೆ ಅರೆಹೊಟ್ಟೆ ಕೆಲಸ ಮಾಡುವ ಮಾಸ್ತ್ರು ಏನು ಮಾಡುವರು?

ಮಾಯಾ:- (ಒಳಗಿನಿಂದ ಇಣಿಕಿ) ಏನು? ಮಾತಿನಲ್ಲೇ ಇವೊತ್ತು ಉಪಾಹಾರವೇನು?

ದೇವ;- ಯಾಕೆ ನಿಮ್ಮ ಕಾಫಿ ತಿಂಡಿಯೂ ಆಗಿಲ್ಲ?

ಆದಿ:- ಕಾಫಿ ಆಯ್ತು, ಬೆಳಗ್ಗೆ ತಿಂಡಿ ಅಭ್ಯಾಸ ನನಗಿಲ್ಲ. ನಿಮಗಾಗಿ ಕಾಫಿ ತಿಂಡಿ ಏರ್ಪಾಡಾಗಿದೆ.

ದೇವ:- ಛೆ! ಛೆ! ನನಗೆ ತಿಂಡಿಯಿರದಿದ್ದರೂ ಅಡ್ಡಿಯಿಂಲಿಲ್ಲ.

ಆದಿ:- ಅದಕ್ಕೇನಂತೆ ಮಾಡಿದ್ದಾಳೆ. ಸೇರಿದಷ್ಟು ತಗೊಳ್ಳಿ; ಆ ಮೇಲೆ ಮಾತಾಡೋಣ.

ದೇವ;- ಅಂದ್ರೆ ನಾನೊಬ್ಬನೆ....

ಆದಿ;- ನಾನೂ ಕೂತಿರುತ್ತೇನೆ ಜೊತೆಗೆ (ಇಬ್ಬರೂ ಒಳಗೆ ಹೋಗುವರು)

ಸನಾತನಿ;- (ಬರುತ್ತಾ) ಆದೀ, ಆದೀ, ಆದಿಮೂರ್ತೀ!

ನೂತನ;- (ಬಂದು) ಅಪ್ಪ ಈಗ ಬರ್ತಾರೆ ಕೂತಿರ್ಬೇಕಂತೆ.

ಸನಾ;- ಏನಾದ್ರೂ ಕೆಲಸದಲ್ಲಿದ್ದಾನೇನು?

ನೂತನ:- ಹೂಂ, ಕೈಗೂ ಬಾಯಿಗೂ ಜಗಳ ಹತ್ತಿಬಿಟ್ಟಿದೆ.

ಸನಾ;- ಹೊ! ಊಟ ಮಾಡ್ತಿದ್ದಾನೇನು ಇಷ್ಟು ಬೇಗ್ನೆ?

ನೂತನ;- ಊಟ ಅಲ್ಲ, ಕಾಫಿ ತಿಂಡಿ.

ಸನಾ;- ಗೊತ್ತಾಯ್ತು. ತಾತ ಬಂದಿದ್ದಕ್ಕೆ ಬೆಳಗ್ಗೆ ತಿಂಡಿ ಏರ್ಪಾಡು.

ಆದಿ;- (ಕಾಫಿ ಲೋಟ ಹಿಡಿದು ಬಂದು) ತಗೋ ತೀರ್ಥ. ತೀರ್ಥ ಅಂದರೆ ಕಾಫಿ ಕಷಾಯ.

ಸನಾ;- (ತಗೊಂಡು) ಏನಯ್ಯಾ ಇದು? ಮುಖ ನೋಡಿ ಮಣೆ ಹಾಕೋ ಅತಿಥಿ ಸತ್ಕಾರ?

ಆದಿ;- ಭಾರತದ ಸಾರ್ವತ್ರಿಕ ಪದ್ಧತಿ.

ಸನಾ;- ಒಳಗೆ ಏನು ತಿಂಡಿ ಮಾಡಿಸಿದ್ದಿ?

ಆದಿ:- ದೋಸೆ! ನೀನೂ ತಿನ್ನುತ್ತೀಯೇನು? (ಮಗನಿಗೆ) ಒಳಗೆ ಸನಾತನಿಗೂ ಒಂದು ಮಣೆ ಹಾಕು. (ನೂತನ ಹೋಗುವನು)

ಸನಾ;- ಛೆ! ಛೆ! ನಾನು ಬೆಳಿಗ್ಗೆ ಮುಸುರೆ ತಿನ್ನೋದಿಲ್ಲ.

ದೇವ;- (ಬಂದು) ನಾವೇನೋ ತಿನ್ನುತ್ತೇವೆ. ಮೊದಲೊಂದು ಕಾಲ ಇತ್ತು. ನಾವು ಸಣ್ಣವರಿದ್ದಾಗ ಗಂಜಿ ಊಟ ಮಾಡುತ್ತಿದ್ದೆವು. ಈಗ ಹೊಸ ಕಾಲವೂ ಬಂತು; ಬರಗಾಲವೂ ಬಂತು. ಹಾಗಾಗಿ ಕಾಫಿ ತಿಂಡಿ.

ಸನಾ;- ಹೂಂ, ಒಂದೊಂದು ಕಡೆ ಒಂದೊಂದು ಸಂಪ್ರದಾಯ. ಇಷ್ಟು ಸಣ್ಣ ಕರ್ನಾಟಕದಲ್ಲಿ ಬೇರೆ ಬೇರೆ ಪದ್ಧತಿ.

ಆದಿ;- ಅದಕ್ಕೆ ಭಾರತವೆಂದರೆ ವೈವಿಧ್ಯದ ಮರಳ ಮುದ್ದೆ ಎನ್ನೋದು.

ದೇವ;- ಇದರಲ್ಲಿ ವೈವಿಧ್ಯವೇನು? ಒಬ್ಬೊಬ್ಬರಿಗೆ ಒಂದೊಂದು ರುಚಿ ಇದ್ದ ಹಾಗೆ ಒಂದೊಂದು ಪದ್ಧತಿ. ಎಲ್ಲರೂ ಹಸಿವಾದಾಗ ರುಚಿ ಸಿದ್ದನ್ನು, ತಮ್ಮಲ್ಲಿ ಸಿಗುವುದನ್ನು ತಿನ್ನುತ್ತಾರೆ. ಹಸಿವು ಆಹಾರ ಎಲ್ಲರಿಗೂ ಒಂದೇ ಅಲ್ಲವೇ?

ಸನಾ;- ಆಹಾರ ಪಾನೀಯದ ಐಕ್ಯ ಪ್ರಪಂಚಕ್ಕೇ ಏನು; ಪ್ರಾಣಿವರ್ಗಕ್ಕೇ ವಿಸ್ತಾರವಾಗಿದೆ. ಎಷ್ಟೊಂದು ವಿಧವಾದ ಜೀವರಾಶಿಯಿದೆಯೋ ಅಷ್ಟಕ್ಕೂ ಆಹಾರ, ನಿದ್ರಾ, ಭಯ, ಮೈಥುನಂಚ.

ಆದಿ;- ಭಾವೈಕ್ಯಕ್ಕೆ ಸನಾತನಿಯ ಶಾಸ್ತ್ರಾಧಾರ ಬೇರೆ.

ಸನಾ;- ಇದು ಶಾಸ್ತ್ರ ಅಲ್ಲ; ಸುಭಾಷಿತ ಕಣೋ!

ಆದಿ;- ಅದೆಲ್ಲ ನಮ್ಮಂತಹ ಪಾಮರರಿಗೆ ಹೇಗೆ ತಿಳಿಯಬೇಕು? ಅಂಚ ಮಂಚ ಅಂತ ಶ್ಲೋಕ ಹೇಳಿದರೆ ಮಂತ್ರವೊ ಶಾಸ್ತ್ರವೋ ಇದ್ದೀತು ಅಂತ ನಂಬುವ ಅಂಧ ಭಕ್ತರು ನಾವು! ಅಂದ ಹಾಗೆ ಇಷ್ಟು ಬೇಗನೆ ಪಾದ ಬೆಳೆಸಿದ್ದೀಯಲ್ಲ ಈ ಕಡೆ, ಈವೊತ್ತು ಪೂಜೆ ಇಲ್ವೆ?

ದೇವ;- ಪೂಜೆ?

ಸನಾ;- ಹೂಂ, ಈ ಸನಾತನಿ ಮಹಾ ಭಗವದ್ಭಕ್ತ, ನಮ್ಮೂರ ರಾಮ ಮಂದಿರದ ಪೂಜೆ ಭಟ್ಟ.

ದೇವ;- ರಾಮ ಮಂದಿರ? ಹಂ, ಹಂ, ಹೋದ ಸಲ ನಾನು ಬಂದಿದಾಗ ಯಾವುದೋ ದೇವಸ್ಥಾನ ಕಟ್ಟುವುದಕ್ಕೆ ವಂತಿಗೆ ಕೊಟ್ಟಿದ್ದೆ.

ಆದಿ;- ಹೌದು; ಆ ದೇವಸ್ಥಾನವನ್ನು ಹುಟ್ಟಿಸಿದವನೂ ಊರೂರ ಮಂದಿಯ ಸಹಾಯದಿಂದ ಕಟ್ಟಿಸಿದವನೂ ಈ ಪುಣ್ಯಾತ್ಮನೇ. ಈಗ ಪೂಜೆ, ಪ್ರವಚನ ನಡೆಸುತ್ತಿರುವವನೂ ಈತನೇ. ತುಂಬಾ ಭಾವುಕ, ಆದರೆ ಬಾಯಿ ತೆಗೆದರೆ ಬುಸ್ ಎನ್ನುವ ಜಾತಿ.

ಸನಾ;- ಚೆನ್ನಾಗಿ ಪರಿಚಯ ಮಾಡಿಕೊಡುತ್ತಿದ್ದೀ. ನಗುನಗುತ್ತಾ ಹಾವಿಗೆ ಹೋಲಿಸುತ್ತಿದ್ದೀಯಲ್ಲೋ ನನ್ನನ್ನು?

ಆದಿ;-ಕಂಡದ್ದನ್ನು ಕಂಡಂತೆ ಹೇಳಿದರೆ, ಕೆಂಡದಂತಹ ಕೋಪ ಬಂದ್ರಂತೂ ನಾನು ಹೇಳಿದ ಸತ್ಯಕ್ಕೆ ಬೇರೆ ಆಧಾರ ಬೇಡ. ನಿನ್ನ ಧರ್ಮಾಭಿಮಾನ, ಭಾಷಾಭಿಮಾನಗಳು, ಸಾಮಾನ್ಯ ವಿಷವೇನು?

ಸನಾ;- ಓ! ಆ ಮಾತು ಹೇಳುತ್ತೀ. ಅಭಿಮಾನವೆಂದರೆ ವಿಷವೇನಯ್ಯಾ?

ಆದಿ;- ಅಲ್ಲವೇ ಮತ್ತೆ? ದೇಶದ ಜನ ದೇವರನ್ನು ಮರೆತು ಆಚಾರದ ಹೆಸರಿನಲ್ಲಿ ಅನಾಚಾರವನ್ನೂ, ಧರ್ಮದ ಹೆಸರಿನಲ್ಲಿ ಅಧರ್ಮವನ್ನೂ ಮಾಡಿ ಸಮಾಜ ಕೆಡುತ್ತಿರುವಾಗ ಬೇರೆ ಬೇರೆ ಮಹಾತ್ಮರು ಮತಾಚಾರ್ಯರಾಗಿ ಹಿಂದಿನದನ್ನೇ ಹೊಸ ಹೆಸರಿಟ್ಟು 'ಹೊಸಮತ' ಹೊಸ ಪಂಥಗಳೆಂದು ಜನರಿಗೆ ಉಪದೇಶಿಸಿದರು. ಹಳತಿನ ತಿರಸ್ಕಾರ, ಹೊಸತಿನ ಪುರಸ್ಕಾರ ಸ್ವಾಭಾವಿಕ ಎನ್ನೋದು ಎಲ್ಲರಿಗೂ ಗೊತ್ತು. ವಿವೇಕವಿಲ್ಲದವರು ತತ್ವವನ್ನು ಮರೆತು ಆ ದೇವರು, ಈ ಧರ್ಮ, ಆ ಮತ, ಈ ಜಾತಿ ಎಂದು ಹೆಸರಿನ ಒಣ ಅಭಿಮಾನವನ್ನು ಮಾತ್ರ ವಿಷದ ಹಾಗೆ ಹರಡಿಸಿ ಎಲ್ಲವನ್ನೂ ಕೆಡಿಸಿ ಬಿಟ್ಟರು.

ದೇವ;- ವಿಷಯ ಬಿಟ್ಟು ಇಬ್ಬರೂ ವಿಷ ಕಾರಲು ಹೊರಟರೆ....

ಆದಿ;- ಏನೂ ಆಗೋದಿಲ್ಲ, ನಮಗೆ ಇದೇ ರೂಢಿ ಬ್ರಿಟಿಷರ ಕಾಲದ

ಲಾರೀ ಚಾರ್ಜು ಇದ್ದ ಹಾಗೆ. ಈಗ ಸ್ವಾತಂತ್ರ್ಯ ಬಂದ ಮೇಲೆ ಲಾರಿ ಎತ್ತುವುದು ಧರ್ಮ ಅಲ್ಲಾಂತ ಬರೀ ಮಾತಿನ ಚಾಟಿ ಬೀ ಸುತ್ತಾ ಇರುತ್ತೇವೆ. ಗುಂಡಿಲ್ಲದ ಬಾನೆಟ್ ತೋರಿಸಿದ ಹಾಗೆ. ನಮ್ಮೊಳಗೆ ವಾದ ಆದ್ರೂ ವಿರೋಧ ಬರೋದಿಲ್ಲ; ಅಲ್ವೆನೋ?

ಮಾಯಾ;-(ಒಳಗಿಂದ) ಸ್ವಲ್ಪ ಈ ಕಡೆ ಬರ್ತೀರೋ? ಆ ಕಡೆ ಯಾವನೋ ತಲೆಹೋಕ ನಿಂತಿದ್ದಾನೆ!

ಆದಿ:- ನಿಂತಿರ್ಲಿ ಬಿಡು. ಓಣಿ ಎಂದ ಮೇಲೆ ಎಂಥೆಂಥವರೋ ಬರು ತ್ತಿರುತ್ತಾರೆ.

ದೇವ:- ಹೋಗಿ ನೋಡುವ........ (ಒಳಗೆ ಹೋಗುವನು)

ಮಾಯಾ:- ನಿನ್ನೆ ಇಲ್ಲಿಗೆ ಬಂದವನೂಂತ ಕಾಣುತ್ತೆ. (ಮರೆಯಾಗುವಳು)

ಸನಾ:- ಎಂಥಾ ಅಭಿಮಾನಶೂನ್ಯನೋ ನೀನು.... ನೀನೂ ಹೋಗಯ್ಯ. ಆ ಮುದುಕನಾದ್ರೂ ಮಗಳ ರಕ್ಷಣೆಗೆ ಧಾವಿಸಿದ. ನೀನೂ ಒಳ್ಳೆಯ ಗಂಡ ಕಣೋ.

ಆದಿ:- ಈಗ ರಕ್ಷಣೆಯ ಸಮಸ್ಯೆಯೇನೂ ಇಲ್ಲ.

ಸನಾ:- ಹಾರಿಸಿ ಮಾತಾಡ್ಬೇಡ್ರೋ ಸೋಮಾರಿತನದ್ದೇ. ಯುದ್ಧಕಾಲ ದಲ್ಲಿ ಆಯುಧ ತಯಾರಿ ಮಾಡೋದಲ್ಲ.... ಯಾರೋ ನಿನ್ನೇನೂ ಬಂದಿದ್ನಂತಲ್ಲಾ?

ಆದಿ:- ನಿನ್ನೆ ಬಂದವನೂಂದ್ರೆ? ಸರಿ, ಸರಿ. ಎಂತೆಂಥವರೋ ಬಂದು ಸೇರ್ಕೊಂಡಿದ್ದಾರೆ-ಈ ದೇಶದಲ್ಲಿ. (ತೋರಿಸಿ) ನೋಡು, ಅವನೇ ಚಂದು! ಅವ್ನೋ ಭಾಯಿ. [ಬಾರಯ್ಯಾ ಸಹೋದರ]

ಚಂದ್ರು;- (ಬರುತ್ತಾ) ಸನಾತನಿ ಇಲ್ಲಿ ಇದ್ದಾರೆ?

ಸನಾ:- ಇದ್ದೇನೆ, ಯಾವ ಕಡೆಯಿಂದ ಬಂದಿ?

ದೇವ:- (ಬಂದು) ಎಲ್ಲೋ ನುಸುಳಿಕೊಂಡ ಕಳ್ಳ. ಹಿತ್ತಿಲ ಕಡೆ ಹಾದಿ ಇದ್ರೆ ಹೀಗೆ.... (ಚಂದ್ರುವನ್ನು ದಿಟ್ಟಿಸಿ ನೋಡುವನು)

ಮಾಯಾ:- (ಒಳಗಿಂದ) ಅವನೇ.

ದೇವ:- ಟ್ಲಾಂ?

ಆದಿ:- ಸರಿಹೋಯ್ತು. ಹಗ್ಗ ಕಂಡು ಹಾವೂಂತ ಹಾರಾಡಿದ ಹಾಗೆ. ಈತ ಚಂದ್ರಕಾಂತ ಅಂತ ಇದೇ ಊರಿನವನು. ಆದರೆ ಅನೇಕ ವರ್ಷಗಳಿಂದ ಉತ್ತರ ಹಿಂದುಸ್ಥಾನದಲ್ಲಿದ್ದವನು.

ದೇವ:- ನಿನ್ನೆ ರಸ್ತೆಯಲ್ಲಿ ಸಿಕ್ಕಿದ್ದ. ಅರ್ದಮರ್ದ ಮಾತಾಡಿ ಜಾರಿಕೊಂಡಿದ್ದ.

ಸನಾ:- ಪೂರ್ತಿ ಮಾತಾಡೋಕೆ ಸರಿಯಾಗಿ ಕನ್ನಡ ಬಂದ್ರಲ್ವೆ?

ಚಂದ್ರ:- ನಿಜ, ಕನ್ನಡ ಬರಾಕಿಲ್ಲ. ಅದಕ್ಕೆ....

ಸನಾ:- ಹಿತ್ತಿಲ ಕಡೆ ಹೊಂಚು ಹಾಕುತ್ತಾ ಬಂದ ಅಂತ ಕಾಣುತ್ತೆ ಘಟಿಂಗ.

ಚಂದ್ರ:- ಕ್ಯಾ ಬಾತ್ ಹೈ ಭಾಯಿ? [ಯಾವ ವಿಚಾರ?]

ದೇವ:- ಯೇ ಕಹತೇ ಹೈಂ ಕಿ ತುಮ್ ಫಛ್ ವಾಡೇ ಸೇ ಅಯೆ. (ನೀನು ಹಿಂದುಗಡೆಯಿಂದ ಬಂದಿದ್ದೀಯೆಂದು ಇವರು ಹೇಳುತ್ತಾರೆ)

ಚಂದ್ರ:- ಅರೆ! ಆಪ್‌ಕೋ ಹಿಂದೀ ಆತೀ? ರಾಮ್ ರಾಮ್. (ತಮಗೂ ಹಿಂದೀ ಬರುತ್ತದೆಯೇ? ನಮಸ್ಕಾರ.) [ನಮಸ್ಕರಿಸುವನು]

ದೇವ:- ನಮಸ್ತೇ! ಬೈಠೋ. (ಕುಳಿತುಕೋ)

ಸನಾ:- ನಾನು ಬರುತ್ತೇನೆ ಆದಿ. ಬಂದವರು ಕುಳಿತುಕೊಳ್ಳಲಿ.

ಆದಿ:- ಬಂದವರಿಗಾಗಿ ನೀನೇನೂ ಜಾಗ ತೆರವು ಮಾಡಬೇಕಾಗಿಲ್ಲ. ನನ್ನ ಕೋಣೆಯೊಳಗೆ ಇನ್ನೂ ಎರಡು ಕುರ್ಚಿಗಳಿವೆ. ತಂದು ಹಾಕುತ್ತೇನೆ. (ಹೋಗುವನು. ಚಂದ್ರ ದೇವದಾಸನನ್ನೇ ನಿಟ್ಟಿಸುವನು.)

ಸನಾ:- ಯಾಕೋ ನಿಮ್ಮ ಮುಖವನ್ನೇ ನೋಡುತ್ತಿದ್ದಾನೆ ಮುಠ್ಠಾಳ.

ದೇವ:- ಭಾಷೆ ಬಾರದವರನ್ನು ಪರಿಹಾಸ್ಯ ಮಾಡುತ್ತೀರೇನು?

ಚಂದ್ರ:- ಪರಿಹಾಸ್ ಏನು? ಇವರು ಪಂಚಾಯತ್ ಪಂಚ ಪರಮೇಶ್ವರ್ ಹೈ!

ದೇವ:– ನೋಡಿ ನಿಮ್ಮನ್ನು ಪರಮೇಶ್ವರನೆನ್ನುತ್ತಿದ್ದಾನೆ.

ಸನಾ:– ಕಾರ್ಯವಾಸಿ ಕತ್ತೇ ಕಾಲು ಹಿಡಿ ಎನ್ನೋದು ಈತನಿಗೂ ಗೊತ್ತು. ಈ ದಿನ ಸಂಜೆ ನಾನು ಮತ್ತೆ ಮಾತುಕತೆ ನಡೆಸ ಬೇಕಾಗಿದೆ. ಪಿತ್ರಾರ್ಜಿತದಲ್ಲಿ ಅಂಶ ಕೇಳುವುದಕ್ಕೆ ಈತ ದೂರ ದಿಂದ ಧಾವಿಸಿ ಬಂದಿದ್ದಾನೆ.

ದೇವ:– ತಮ್ಮದು ಎಂಬ ಅಭಿಮಾನ ಯಾಂಗಿಲ್ಲ ಹೇಳಿ?

ಸನಾ:– ಇವನದು ಅಭಿಮಾನವಲ್ಲ, ಅತ್ಯಾಚಾರ!

ಆದಿ:– (ಕುರ್ಚಿ ತರುತ್ತಾ) ಬೇಲಿಯೇ ಹೊಲ ಮೇಯಬಾರದು ಸನಾ ತನಿ. ಕುರಿ ಕಾಯಲಿಕ್ಕೆ ತೋಳನನ್ನು ನೇಮಿಸಿದ ಹಾಗಾಯ್ತು ನೀನು ಪಂಚಾಯ್ತಿಗೆ ಸೇರಿ.

ಸನಾ:– ನಿನ್ನ ಸಂಭಾವಿತತನ ನನ್ನಲ್ಲಿ ಬೇಡ. ಅಯೋಗ್ಯರನ್ನು ನಂ ಬುವ ಅವಿವೇಕತನ ನನ್ನಲ್ಲಿಲ್ಲ.

ಚಂದ್ರು:– ನಾನು ಅಯೋಗ್ಯ?

ಸನಾ:– ಅದು ಅಷ್ಟರಲ್ಲೇ ಗೊತ್ತಾಯ್ತು. ಓಣಿಯಲ್ಲಿ ಬಂದು ಹೆಂಗಸ ರನ್ನು ನೋಡುತ್ತಾ ನಿಲ್ಲೋದು ಯೋಗ್ಯತೆ ಏನು?

ಚಂದ್ರು:– ವೋ ಬಾತ್ ಕ್ಯಾ? (ಆ ಮಾತೇನು?) ಕೋಪ ಮಾಡ್ಬೇಡಿ. ಅಪರಾಧ್ ಮಾಫ್ ಕರೋ. (ಅಪರಾಧವನ್ನು ಕ್ಷಮಿಸಿರಿ)

ಸನಾ:– ನಿನ್ನ ಹಿಂದಿ ನನ್ನ ಮುಂದೆ ಬೇಡ.

ದೇವ:– ಇಷ್ಟೊಂದು ಸಿಟ್ಟಾದರೆ ಹೇಗೆ ಸನಾತನಿಯವರೇ?

ಸನಾ:– ಸಿಟ್ಟಲ್ಲ ಸ್ವಾಮಿ. ಇಂಥವರ ಗುಟ್ಟು ನಿಮಗೆ ಗೊತ್ತಿಲ್ಲ. ಈ ಉತ್ತರದ ಮಂದಿ....

ಆದಿ:– ಈತ ಹುಟ್ಟಿದ್ದು ದಕ್ಷಿಣದಲ್ಲೇ, ನಮ್ಮ ಕರ್ನಾಟಕದಲ್ಲೇ, ನಮ್ಮ ಊರಲ್ಲಿ.

ಸನಾ:– ಇರಬಹುದು, ಒಂದೂರಲ್ಲಿ ಹುಟ್ಟಿ ಇನ್ನೊಂದು ಊರಲ್ಲಿ ಬೆಳೆ ಯೋದು ಈ ಕಾಲದಲ್ಲಿ ಸ್ವಾಭಾವಿಕ.

ದೇವ:- ಅಂದ ಮೇಲೆ ಈತ ಪರಕೀಯನಲ್ಲ.

ಸನಾ:- ಸ್ವಕೀಯನಾಗಿಯೂ ಉಳಿದಿಲ್ಲ.

ಆದಿ:- ಉಳಿಸಿಕೊಳ್ಳುವ ಮನಸ್ಸೂ ನಿನ್ನಲ್ಲಿಲ್ಲವಲ್ಲ. ಇವನ ಪರಿಸ್ಥಿತಿಯನ್ನು ಸ್ವಲ್ಪ ವಿಚಾರಿಸಿದ್ದರೆ ನಿನ್ನ ಕಠೋರತೆಯೂ ಕರಗುತ್ತಿತ್ತು.

ಸನಾ:- ಅದೇನು ವಿಚಾರವೋ ತಿಳಿದುಕೊಂಡು ತಿಳಿಸುವ ಹೊಣೆ ನಿನ್ನದು.

ಆದಿ:- ನಾನು ತಿಳಿದುಕೊಂಡಿದ್ದೇನೆ ಸಂಜೆ. ಎಲ್ಲರ ಮುಂದೆಯೂ ತಿಳಿಸುತ್ತೇನೆ. ಅಷ್ಟರ ವರೆಗೆ ಸುಮ್ಮನಿರು. ಗಾಯಕ್ಕೆ ಉಪ್ಪೆರಚಬೇಡ.

ಸನಾ:- ಸರಿ ನಾನೀಗ ಹೊರಡುತ್ತೇನೆ. ಇಲ್ಲಿ ಇದ್ದರೆ ಮಾತಿಗೆ ಮಾತು ಬೆಳೆಯುತ್ತೆ. ನೀವು ಮೂವರೂ ಒಂದೇ ಭಾಷಾಸೂತ್ರದಲ್ಲಿ ಬಂಧಿತರು. ನಿಮ್ಮ ಮಧ್ಯದಲ್ಲಿ ನಾನು ಸೇರುವುದೂ ಸರಿಯಲ್ಲ.

ದೇವ:- ಇದನ್ನು ಮಾತ್ರ ನಾನು ಒಪ್ಪುವುದಿಲ್ಲ. ಆಡುವ ಭಾಷೆಗಿಂತ ಆಡಲಾರದ ಹೃದಯದ ಭಾಷೆಯೊಂದಿದೆ. ಅದನ್ನು ಅರ್ಥಮಾಡಿಕೊಳ್ಳಲು ಬೇಕಾಗಿರುವುದು ಕೇವಲ ಮನುಷ್ಯತ್ವ. ಮನುಷ್ಯತ್ವದ ಐಕ್ಯ ಎಂತಹ ವೈವಿಧ್ಯವನ್ನೂ ಯಾವುದೇ ಭೇದವನ್ನೂ ಹೋಗಲಾಡಿಸುವುದು. ದೇಶಭಾಷೆಗಳನ್ನು ಮೀರಿ ಮನುಷ್ಯರಾಗಿ ಸೇರಿಕೊಳ್ಳುವ.

ಸನಾ:- ಸೇರಬಹುದು. ಆದರೆ ನಮ್ಮ ಔದಾರ್ಯದ ದುರುಪಯೋಗ ಆಗುತ್ತದೆ ಅಷ್ಟೆ! ನಾವು ತೋರಿಸುವ ಔದಾರ್ಯವನ್ನು ಇತರ ಪ್ರದೇಶಗಳವರು ತೋರಿಸುತ್ತಾರೆಯೇ?

ದೇವ:- ಮನುಷ್ಯತ್ವಕ್ಕೆ ಎಲ್ಲಾ ಕಡೆಯೂ ಒಂದೇ. ಜಾತಿ, ಮತ, ಭಾಷೆ, ಪ್ರದೇಶ, ದೇಶ.... ಎನ್ನುತ್ತಾ ಸಂದರ್ಭಾನುಸಾರ ಹೃದಯವೂ ವಿಶಾಲವಾಗುತ್ತಾ ಹೋಗುತ್ತದೆ. ಅವಕಾಶವಾಗದೇ ಇದು ಯಾವುದೂ ಬೆಳಕಿಗೆ ಬಾರದು. ಎದ್ದುಕಾಣುವ ಬಿಕ್ಕಟ್ಟಿನಲ್ಲೇ ಒಕ್ಕಟ್ಟು ಬಲವಾಗಿದೆ ಸ್ವಾಮಿ.... ನಮ್ಮಲ್ಲಿ ಸಾರಿಗೆ

ಸಂಪರ್ಕಗಳೇ ಇಲ್ಲದ ಹಿಂದಿನ ಕಾಲದಲ್ಲಿಯೂ ಭಾರತಾದ್ಯಂತ ಒಂದೇ ಸಂಸ್ಕೃತಿ ಹರಡಿತ್ತು ಎನ್ನುವುದಕ್ಕೆ ಇತಿಹಾಸದ ಆಧಾರ ಇದೆ. ರಾಮಾಯಣ, ಭಾರತಗಳು ಸಾಕ್ಷಿ ಇವೆ.

ಸನಾ:- ಇವೆಲ್ಲಾ ಇತ್ತು ಅಷ್ಟೇ; ಈಗ ಇಲ್ಲ.

ದೇವ:- ಈಗಲೂ ಇದೆ. ನೀವು ಎಂದಾದರೂ ಬೇರೆ ಪ್ರಾಂತ್ಯಗಳಿಗೆ ಹೋಗಿದ್ದೀರಾ?

ಆದಿ:- ಊರು ಬಿಟ್ಟು ಎಲ್ಲೂ ಹೋಗದ ಕೂಪ ಮಂಡೂಕ ಈತ. ಆದಕ್ಕೇ ಮತ, ಭಾಷೆ, ಪ್ರಾಂತ್ಯ ಎಂತ ವಟಗುಟ್ಟುತ್ತಾ ಇರುತ್ತಾನೆ.

ಸನಾ:- ನಾಲ್ಕಕ್ಷರ ಹಿಂದೀ ಕಲಿತರೆ ನೀನೂ ಹಿಂದೂಸ್ಥಾನ ಸುತ್ತಿದ ಹಾಗಾಗಲಿಲ್ಲ.

ದೇವ:- ನಾನು ಸುತ್ತಿದ್ದೇನೆ. ಈ ತನಕ ಈ ವಿಚಾರವನ್ನು ಯಾರ ಹತ್ತಿರವೂ ಹೇಳಲಿಲ್ಲ. ಕೇಳುವ ಸಂದರ್ಭವೂ ಬರಲಿಲ್ಲ ಎನ್ನುವ. ಓವರ್ಸೀಯರ್ ಆಗಿ ನಾನು ಉತ್ತರಭಾರತದ ಬೇರೆ ಬೇರೆ ಭಾಗಗಳಲ್ಲಿ ಕೆಲಸ ಮಾಡುತ್ತಿದ್ದೆ.

ಸನಾ:- ಇಷ್ಟು ಸಣ್ಣ ಕೆಲಸಕ್ಕೆ ಅಷ್ಟು ದೂರ ಹೋದ್ರಾ?

ದೇವ:- ಹೋಗಬೇಕಾಯಿತು. ಋಣಾನುಬಂಧ ರೂಪೇಣ.... ಎನ್ನುತ್ತಾರಲ್ಲ, ಹಾಗೆ ಊರಲ್ಲೆಲ್ಲೂ ಅವಕಾಶ ಸಿಗಲಿಲ್ಲ. ದಾಮೋದರ್ ನದೀಕಣಿವೆ ನಿರ್ಮಾಣ ಕಾಲದಲ್ಲಿ ನನಗೂ ಅವಕಾಶ ದೊರೆಯಿತು. ದುಡಿಯುವ ಮಗನಿಗೆ ಯಾವ ಎಡೆಯಾದರೇನು ಎಂತ ಹೊರಟೆ. ಹಾಗೆ ನೋಡಿದರೆ ಜೀವನದ ಅಪೇಕ್ಷೆ ಒಬ್ಬೊಬ್ಬರನ್ನು ಒಂದೊಂದು ಕಡೆ ಓಡಿಸುತ್ತದೆ. ಹಾಗೆಯೇ ಕೂಡಿಸುತ್ತದೆ. ಈ ಊರಿನ ಶೀನಣ್ಣನೂ ಆಗ ಅಲ್ಲಿದ್ದ. ಮೈಸೂರಿನ ವಿಶ್ವೇಶ್ವರಯ್ಯನವರು ಇಂಡಿಯದಲ್ಲೇ ಏನು? ಏಡನ್ನಿನಲ್ಲೂ ನೀರಾವರಿ ಯೋಜನೆ ಹಾಕಲಿಲ್ಲವೆ? ಸ್ವಾರ್ಥಿಗಳು ಇದ್ದೂರನ್ನು ಇನ್ನಷ್ಟು ಚಿಕ್ಕದು ಮಾಡಿದರೆ, ನಿಸ್ವಾರ್ಥಿಗಳು "ವಸುಧೈವ ಕುಟುಂಬಕಂ" ಎನ್ನುತ್ತಾರೆ.

ಆದಿ:- ಅದೆಲ್ಲ ಈ ಸಂಕುಚಿತ ಸನಾತನಿಗೆ ಅರ್ಥವಾಗಬೇಕಾದರೆ.... ಹೋಗಲಿ.... ಮುಂದೆ ಹೇಳು.

ದೇವ:- ನನ್ನ ಭಾಷೆ ಬೇರೆ, ವೇಷ ಬೇರೆ. ಆದರೂ ಅಲ್ಲಿನ ಅನೇಕರು ನನ್ನನ್ನು ಪರಕೀಯನೆಂದು ಭಾವಿಸಲಿಲ್ಲ. ಪ್ರತಿಯೊಬ್ಬರೂ ಕರೆದು ಉಪಚರಿಸುವವರೇ. ಆ ಕಡೆಯ ಆಹಾರ ಪಾನೀಯಗಳು ಮೊದ ಮೊದಲು ಹಿಡಿಸದಿದ್ದರೂ ಆ ಮೇಲೆ ಬಳಕೆ ಆಯಿತು. ಮುಖ್ಯ, ಜೀವಿಗಳು ಪರಿಸರ ಪರಿಸ್ಥಿತಿಗಳಿಗೆ ಹೊಂದಿಕೊಳ್ಳಬೇಕು ನೋಡಿ.

ಆದಿ:- ನಮ್ಮ ಚಂದ್ರು ತೆಪ್ಪಗೆ ಕುಳಿತು ನೋಡುತ್ತಿರುವುದೇ ಇದಕ್ಕೆ ಸಾಕ್ಷಿ.

ಚಂದ್ರು:- ಕ್ಯಾ ಭಾಯಿಿ? ವ್ಹೊ ಅಪನೀ ಹೀ ಬಾತ್ ಸೋಚ್ ರಹಾ ಥಾ. ಜಬ್ ವ್ಹೊ ಉಧರ್ ಗಯಾ ಥಾ.... (ಏನಣ್ಣಾ ನಾನು ನನ್ನದನ್ನೇ ಯೋಚಿಸುತ್ತಿದ್ದೆ. ನಾನು ಆ ಕಡೆ ಹೋಗಿದ್ದಾಗ)

ದೇವ:- ನಿಜ, ನಿಜ. ನೀನೂ ಆ ಕಡೆ ಹೋಗಿದ್ದಾಗ ಇಂತಹುದೇ ಅನುಭವ ಬಂದಿರಬಹುದು. ಆದ್ದರಿಂದ ನನ್ನ ಮಾತು ಅರ್ಥ ಆಗ ದಿದ್ದರೂ ಅನುಭವಿಸಿದ ನೀನು ಅರ್ಥಮಾಡಿಕೊಳ್ಳಬಲ್ಲೆ. ಸಹಾನು ಭೂತಿ ಇದ್ದರೆ ಎಲ್ಲವೂ ಅರ್ಥವಾಗುತ್ತದೆ. ಆದರೆ ಸುಖಕ್ಕಿಂತ ದುಃಖದಲ್ಲೇ ಸಹಾನುಭೂತಿ ಪ್ರಕಟವಾಗುತ್ತದೆ. ಕಷ್ಟ ಬಂದಾಗ ಮನುಷ್ಯರೆಲ್ಲರೂ ಒಂದಾಗುತ್ತಾರೆ. ಒಂದು ಸಲ.... ಭಯಂಕರ ವಾದ ಗಾಳಿ ಮಳೆ. ಅನಿರೀಕ್ಷಿತವಾಗಿ ಪ್ರಳಯಕಾಲದ ಚಂಡ ಮಾರುತ....ಮೋಡ ಕವಿದ ಆಕಾಶದಲ್ಲಿ ಕಾಳರಾತ್ರಿಯ ಕಗ್ಗತ್ತಲು)

## ಪೂರ್ವ ಸ್ಫುರಣ—FLASH BACK

(ಪಿ. ಸೂ:- ಈ ಪೂರ್ವಸ್ಫುರಣದಲ್ಲಿ ಒಂದೇ ಸನ್ನಿವೇಶದಲ್ಲಿ ಮೂವರೂ ತಮ್ಮ ಮನಸ್ಸಿನಲ್ಲಿಯೇ ತಾವು ಅನುಭವಿಸಿದ ಘಟನೆಯನ್ನು ನೆನಸಿಕೊಂಡಂತೆ ಚಿತ್ರಿಸಲಾಗಿದೆ.)

[ಒಮ್ಮೆಲೇ ರಂಗಭೂಮಿಯಲ್ಲಿ ಕತ್ತಲಾಗಿ ಬಿರುಗಾಳಿ ಗುಡುಗುಗಳ ಅಬ್ಬರ. ರಂಗದಲ್ಲಿದ್ದವರು ಮರೆಯಾಗುತ್ತಾರೆ. ಆದಿಮೂರ್ತಿ ಮಾತ್ರ ಅಡ್ಡಾಡುತ್ತಿರುವುದು ಮಿಂಚಿನ ಪ್ರಕಾಶದಲ್ಲಿ ಕಾಣಿಸುತ್ತದೆ. ಸ್ವಲ್ಪಕಾಲ ರಂಗಭೂಮಿಯಲ್ಲಿ ಕೇವಲ ಮಿಂಚಿನ ಪ್ರಕಾಶ ಮಾತ್ರ. ಗಾಳಿ ಸಿಡಿಲು ಮಳೆ ಜೋರಾಗಿದೆ.)

ಆದಿ:– (ಕನವರಿಸಿದಂತೆ) ಕಷ್ಟ ಬಂದಾಗ ಎಲ್ಲರೂ ಒಂದಾಗುತ್ತಾರೆ. ಒಂದು ಸಲ... ಭಯಂಕರವಾದ ಗಾಳಿ ಮಳೆ.... ಅಬ್ಬಬ್ಬಾ! ಎಂಥಾ ಮಳೆ!

ಮಾಯಾ:– (ಲಾಂದ್ರ ಹಿಡಿದು ಬಂದು) ನೀವು ಇಲ್ಲೇಕೆ ನಿಂತಿದ್ದೀರಿ? ಗಾಳಿ ಮಳೆ ಹೊಡೆಯುತ್ತಾ ಇದೆ. ಥಂಡಿ ಹತ್ತಿ ಜ್ವರ ಕೆಮ್ಮು ಬಂದರೆ

ಆದಿ:– ಬೆಚ್ಚಗೆ ಮಲಗಿಬಿಡುತ್ತೇನೆ. ಉಪಚರಿಸಲಿಕ್ಕೆ ಹೇಗೂ ನೀನಿದ್ದಿ ಯಲ್ಲಾ.

ಮಾಯಾ:– ಜೋರಾಗಿ ಸಿಡಿಲು ಹೊಡೀತಾ ಇದೆ. ಎಲ್ಲಾದರೂ.... ಒಳಗೆ ಬರಬಾರದೇ? ನನಗೆ ಹೆದರಿಕೆಯಾಗುತ್ತಿದೆ.

ಆದಿ:– ಹೆದರಿಕೆಯಾದರೆ ಕಿವಿ ಮುಚ್ಚಿಕೋ, ಕಣ್ಣು ಮುಚ್ಚಿಕೋ.

ಮಾಯಾ:– ನೀವೊಬ್ಬರು ಕಣ್ಣೋ ಕಿವಿಯೋ ಮುಚ್ಚಿದರೆ ಅನಾಹುತ ತಪ್ಪುತ್ತೇ?

ಆದಿ:– ಮತ್ತೆ ಮನೆಯೊಳಗಿದ್ದರೆ ಹೊಡೆಯುವ ಸಿಡಿಲು ಬಿಟ್ಟೀತೇನು?

ಮಾಯಾ:– ಇಲ್ಲದ್ದೆಲ್ಲಾ ಆಡಬೇಡಿ ನೀವು. ದೈವ ಮುನಿದಾಗ ಮನುಷ್ಯ ತಮಾಷೆ ಮಾಡಬಾರದು. ಒಳಗೆ ಬನ್ನಿ. ಗಾಳಿಗೆ ದೀಪ ಕೂಡ ನಿಲ್ಲೋದಿಲ್ಲ.

ಆದಿ:– ಜೀವನವೇ ಗಾಳಿಗೊಡ್ಡಿದ ದೀಪ ಕಣೇ. ಸಿಟ್ಟಾಗಬೇಡ. ನಿನ್ನ ಸಿಟ್ಟಿಗಿಂತ ಜೋರಾಗಿದೆ ಪ್ರಕೃತಿಯ ಸಿಟ್ಟು. ಅದಕ್ಕೇ ನೋಡುತ್ತಾ ನಿಂತುಬಿಟ್ಟಿದ್ದೇನೆ. (ಜೋರಾಗಿ ಸಿಡಿಲು)

ಮಾಯಾ:-ಅಯ್ಯಯ್ಯೋ ನಿಮಗೆ ದಮ್ಮಯ್ಯ, ಇಲ್ಲಿ ನಿಲ್ಲಬೇಡಿ ಅಂತೀನಿ. ದಯವಿಟ್ಟು ಒಳಗೆ ಬನ್ನಿ.

ಆದಿ:- ಮನೆ ಇದ್ದವರು ಬೆಚ್ಚಗಿರೋದಕ್ಕೆ ಯತ್ನಿಸುತ್ತೇವೆ. ಮನೆಯೇ ಇಲ್ಲದವರು ಈ ಗಾಳಿ ಮಳೆಗೆ.... ಪಾಪ.... ಎಷ್ಟು ಮಂದಿ ನೆನೆದು ನಡುಗುತ್ತಿದ್ದಾರೋ? ದೇವರ ಕರುಣಾವರ್ಷ ಅನೇಕ ಅನಾಥ ರಿಗೆ ದಾರುಣ ಶಾಪವಾಗಿದ್ದೀತು. ನೋಡು, ಅಲ್ಲಿ ಯಾರೋ ಬರುತ್ತಿದ್ದಾರೆ. ಅದೋ ಜಾರಿ ಬಿದ್ದರು.

ಮಾಯಾ:- ಈ ವೇಳೆಗೆ ಯಾರು ಮನೆ ಬಿಡುತ್ತಾರೆ.

ಆದಿ:- ಮನೆಯಿಲ್ಲದವರು.... (ದೂರದಿಂದ ಮುದುಕಿಯೊಬ್ಬಳು ಕೋ ಲೂರಿಕೊಂಡು ಹೇಗೆ ಹೇಗೋ ನಡೆದುಬರುತ್ತಿರುವುದು ಮಿಂಚಿನ ಬೆಳಕಿನಲ್ಲಿ ಕಾಣಿಸುತ್ತದೆ.) ಯಾರು ಈ ಮಳೆಗೆ, ಈ ರಾತ್ರಿಯಲ್ಲಿ?

ಮುದುಕಿ:- ನೀವಾದರೂ ಎಚ್ಚರ ಇದ್ದೀರಲ್ಲ. ನಾಲ್ಕಾರು ಮನೆಯಲ್ಲಿ ಕೂಗಿ ಸಾಕಾಯಿತು. ಒಬ್ಬರೂ ಬಾಗಿಲೇ ತೆಗೆಯಲೊಲ್ಲರು.

ಆದಿ:- ಯಾಕೆ? ಒಳಗೆ ಬಾ ಅಜ್ಜಿ. ಎಷ್ಟೊಂದು ನೆನೆದಿದ್ದೀಯಾ?

ಮುದುಕಿ:- ಸಾಯುವ ಜೀವಕ್ಕೆ ನೆನೆದರೇನು? ಒಣಗಿದರೇನು? ಆದರೆ ನನ್ನ ಮನೆ.... ಕುಸಿದು ಬಿತ್ತು.

ಮಾಯಾ;- ಮನೆ ಕುಸಿಯಿತೇ? ಯಾರಿಗಾದ್ರೂ ಪ್ರಾಣಾಪಾಯ....

ಮುದುಕಿ:- ಪುಣ್ಯಕ್ಕೆ ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಸ್ವಲ್ಪ ಸಹಾಯಕ್ಕೆ ಬರುತ್ತೀರೇನು?

ಆದಿ:- ಈ ಮಳೆಗೆ ಇನ್ನೇನು ಮಾಡಲಾದೀತು? ಒಳಗೆ ಬಾ. ಸ್ವಲ್ಪ ಮಳೆ ನಿಂತರೆ....

ಮುದುಕಿ:- ಅಲ್ಲಿ ಯಾರಾದರೂ ಕಳ್ಳರು....

ಮಾಯಾ;- ಈ ವೇಳೆಗೆ ಕಳ್ಳರೂ ಹೊರಡಲಾರರು.

ಮುದುಕಿ:- ನಿನಗೆ ಗೊತ್ತಿಲ್ಲ. ಕಳ್ಳರು ಕೊಳ್ಳೆ ಹೊಡೆಯುವುದೂ ಇಂಥ ಆಪತ್ಕಾಲದಲ್ಲಿಯೇ. ನೀವು ಬರುವುದಾದರೆ ಬನ್ನಿ. ನಾನಂತೂ.... (ಹೊರಡುವಳು)

ಮಾಯಾ:- ನಿಲ್ಲಿ ಅಜ್ಜಿ ಹೋಗಬೇಡಿ. ಸ್ವಲ್ಪ ಮಳೆ ನಿಂತ ಮೇಲೆ....

ಆದಿ:- ಹೋಗಿಯೇ ಬಿಟ್ಟಳು. ಪ್ರಾಣಕ್ಕಿಂತಲೂ ಮನೆಯ ಮೇಲಿನ ಮೋಹ ಮುದುಕಿಗೆ. ಇಷ್ಟಿದ್ದರೂ ಯಾಕೆ ಓಡಿಬಂದಳೋ? (ಮುದುಕಿ ಕರೆದು ಮರೆಯಾಗುವಳು. ರಸ್ತೆ ಪರದೆ ಇಳಿಯುವುದು)

— ತೆರೆ —

## ನೋಟ ೬

[ಗಾಳಿ, ಮಳೆ, ಕತ್ತಲು, ಗುಡುಗು-ಮಿಂಚು ಹಾಗೆಯೇ ಇದೆ. ಚಂದ್ರು ಈಗ ಹುಡುಗ, ಸ್ವಲ್ಪ ಚಿಕ್ಕ ವಯಸ್ಸು.... ಮಳೆಗೆ ನೆನೆಯುತ್ತಾ ಬಂದು ಬೀದಿಯ ಒಂದು ಮೂಲೆಯಲ್ಲಿ ನಡುಗುತ್ತಾ ಕುಳಿತುಕೊಳ್ಳುವನು.]

ವ್ಯಕ್ತಿ:- (ನೇಪಥ್ಯದಿಂದ ಮುಖ ಮಾತ್ರ ತೋರಿಸಿ) ಏ ಯಾರಲ್ಲಿ ಕಳ್ಳ?

ಚಂದ್ರು:- ನಾನು ಕಳ್ಳನಲ್ಲ. ಒಬ್ಬ ಪರದೇಶಿ.

ವ್ಯಕ್ತಿ:- ಇಲ್ಲಿ ಯಾಕೆ ಕುಳಿತಿದ್ದೀ? ಹೋಗು ಇಲ್ಲಿಂದ.

ಚಂದ್ರು:- ಮಳೆ ಬರುತ್ತಾ ಇದೆ. ಎಲ್ಲಿಗೆ ಹೋಗಲಿ?

ವ್ಯಕ್ತಿ:- ಎಲ್ಲಾದರೂ ಸತ್ತು ಹೋಗು! ಇಲ್ಲಿರಕೂಡದು.

ಚಂದ್ರು:- ಮಳೆ ನಿಂತರೆ ಮರದ ಬುಡಕ್ಕಾದರೂ ಹೋಗುತ್ತೇನೆ. ಅಷ್ಟರ ವರೆಗೆ....

ವ್ಯಕ್ತಿ:- ಕೂಡದು ಹೋಗುತ್ತಿಯೋ ಇಲ್ಲವೋ?

ಚಂದ್ರು:- ಹೋಗುತ್ತೇನೆ. (ಎದ್ದು) ಮನೆಯ ಒಳಗಲ್ಲ, ಹೊರಗೂ ಕೂಡ ಜಾಗ ಇಲ್ಲ. (ಜಾರಿ ಬೀಳುವನು) ಅಯ್ಯಯ್ಯೋ.... (ಎದ್ದು ತಡವರಿಸುತ್ತಾ ಮರೆಯಾಗುವನು)

ದೇವದಾಸ್:- (ಇನ್ನೊಂದು ಕಡೆಯಿಂದ ಗಾಬರಿಯಿಂದ ಬರುತ್ತಾ—ಈಗ ಸ್ವಲ್ಪ ಮಧ್ಯ ವಯಸ್ಸು) ಯಾರಾದರೂ ಬನ್ನಿರೋ, ಕಟ್ಟೆಯೊಡೆದು ಮನೆಯೊಳಗೆ ನೀರು ನುಗ್ಗುತ್ತಿದೆ. (ಹಿಂತಿರುಗಿ ಓಡುವನು.

ತೆರೆಯೊಳಗೆ ಗದ್ದಲ ಚೀತ್ಕಾರ. "ಅಯ್ಯಯ್ಯೋ....ಅಲ್ಲಿ....ಅಲ್ಲಿ...." ಸದ್ದು, ನಿಧಾನವಾಗಿ ಮಳೆ ನಿಂತು ಬೆಳಕಾದಾಗ ದೇವದಾಸ್ ಚಿಂತಾಕ್ರಾಂತನಾಗಿ ನಿಂತಿರುವನು.)

ಶೇಷಣ್ಣ:- ಇನ್ನೆಷ್ಟು ಚಿಂತೆ ಮಾಡಿ ಏನು ಫಲ ಹೇಳು? ನಿನ್ನ ಆ ಮಗುವಿನ ಋಣ ಅಷ್ಟೇ ಎಂದು ಧೈರ್ಯ ತಂದುಕೋ.

ದೇವ:- ಇನ್ನೆಂತಹ ಧೈರ್ಯ ಶೇಷೂ? ಚಿನ್ನದಂತಹ ಹೆಣ್ಣುಮಗು ಕಣ್ಣ ಮುಂದೆಯೇ ನೀರಲ್ಲಿ ಕೊಚ್ಚಿಹೋಗುತ್ತಿದ್ದರೂ ಮಂದಿಯ ಮಾತು ಕೇಳಿ ಹೇಡಿಯಾದೆ.

ಶೇಷ:- ನೀನು ಹಾರಿಕೊಂಡಿದ್ದರೆ ನಿನ್ನ ಪ್ರಾಣವೂ ಹೋಗುತ್ತಿತ್ತು. ಅದಕ್ಕೇ ಸೇರಿದ ಮಂದಿ ನಿನ್ನನ್ನು ತಡೆದಿಟ್ಟರು. ಆದರೆ ಹತ್ತಿಪ್ಪತ್ತು ಮಂದಿ ಆ ಹುಚ್ಚು ಪ್ರವಾಹದಲ್ಲಿಯೂ ಈಜುಬಿದ್ದು ಮಗುವನ್ನು ಉಳಿಸಲು ಪ್ರಯತ್ನಿಸಲಿಲ್ಲವೇ? ಆದರೆ ಋಣವಿಲ್ಲದಾಗ ಯಾವ ಯತ್ನವೂ ಫಲಿಸುವುದಿಲ್ಲ.



ದೇವ:- ಮಗಳ ದೇಹವಾದರೂ....

ಶೇಷ:- ಬದುಕಿ ಸಿಕ್ಕಿದ್ದರೆ ಈ ದುಃಖ ತಪ್ಪುತ್ತಿತ್ತು. ಕೈ ಮೀರಿದ ಮೇಲೆ ಹಂಬಲಿಸಿ ಫಲವೇನು? ಮನೆಗೆ ನಡೆ. ನೀನೇ ಧೃತಿಗೆಟ್ಟರೆ ನಿನ್ನ ಹೆಂಡತಿ?....

ದೇವ:- ಆಕೆಯೂ ಪ್ರವಾಹದಲ್ಲಿ ಬೀಳತಕ್ಕವಳು. ನೆರೆಮನೆಯ ಹೆಂಗಸರು ತಡೆದರು. ಯಾವೂರೋ, ಯಾವ ಜಾತಿಯೋ, ಇನ್ನೂ ಆಕೆಯನ್ನು ಉಪಚರಿಸಿ ಸಮಾಧಾನ ಹೇಳುತ್ತಿದ್ದಾರೆ. ಈ ಊರಿಗೆ ಬಂದು ನನ್ನ ಮಮತಾ, ಐದು ವರ್ಷದ ಮಗು ಬಲಿಯಾಗಬೇಕಾಯಿತು.

ಶೇಷ:- ನೀನು ಅದನ್ನೆಲ್ಲಾ ಮತ್ತೆ ಹಂಬಲಿಸಬೇಡ. ಮನೆಗೆ ಹೋಗೋಣ.

ದೇವ:- ನೀನೊಬ್ಬ! ಹುಟ್ಟೂರಲ್ಲಿ ಪರಿಚಯವಿಲ್ಲದಿದ್ದರೂ ಪರವೂರಲ್ಲಿ ನಾವು ಉದ್ಯೋಗದ ಮೂಲಕ ಸಂಧಿಸಿದವರು! ಬಂಧುಗಳೆಲ್ಲಾ ಊರಲ್ಲಿದ್ದರೂ ನೀನು ಇಲ್ಲಿ ನನಗಾಗಿ ಮರುಗುತ್ತಿದ್ದಿ.

ಶೇಷ:– ನಾನೇ ಎಂದೇನು? ಕಷ್ಟದಲ್ಲಿ ನೆರವಾಗುವುದು ಮನುಷ್ಯ ಧರ್ಮ. ಇದಕ್ಕೆ ಯಾವ ಪ್ರಾಂತ್ಯಭೇದವೂ ಇಲ್ಲ. ನಾವು ಒಂದೇ ನಾಡಿನವರಾದ್ದರಿಂದ ನಮ್ಮ ಸೇರುವಿಕೆ ಸ್ವಲ್ಪ ಹೆಚ್ಚಿರಬಹುದು, ಅಷ್ಟೇ.

ದೇವ:– ಊರು ಬಿಟ್ಟರೂ ದೇವರು ಉಳಿದೆಲ್ಲವನ್ನೂ ಕೊಟ್ಟ. ಆದರೆ ಕೈಗೆ ಬಂದ ಮಗಳನ್ನು ಮಾತ್ರ ಕಿತ್ತುಕೊಂಡ. ನನ್ನ ಮಮತಾ.... ನಿಜಕ್ಕೂ ಮಮತೆಯ ಮೂರ್ತಿ! ಅವಳನ್ನು ಇಲ್ಲೇ ಶಾಲೆಗೆ ಸೇರಿಸಬೇಕೆಂದು ಮಾಡಿದ್ದೆ. ಎಲ್ಲವೂ ನೀರು ಪಾಲು! ಪುಣ್ಯಕ್ಕೆ ಹಿರೀ ಮಗಳನ್ನು ಓದಿಗಾಗಿ ಊರಲ್ಲೇ ಬಿಟ್ಟುಬಂದೆವು. ಇಲ್ಲವಾದರೆ—

ಶೇಷ:– ಇಲ್ಲವಾಗಿದ್ದರೂ ಏನೂ ಆಗುತ್ತಿರಲಿಲ್ಲ. ಇದೆಲ್ಲ ಆಕಸ್ಮಿಕ ಅಷ್ಟೆ. ಗ್ರಹಚಾರ ಒಂದೊಂದು ತರದಿಂದ ಸೆಳೆಯೋದು.

ದೇವ:– ಇನ್ನು ಸಾಕು ಈ ಊರು. ಊರಿಗೆ ಮರಳಿಬಿಡುತ್ತೇವೆ.

ಶೇಷ:– ಛೆ! ಛೆ! ಈ ಊರು ಏನೂ ಮಾಡಿಲ್ಲ ನಿನಗೆ.

ದೇವ:– ಈ ಊರಲ್ಲಿ ಇದ್ದಷ್ಟು ದಿನವೂ ಮಮತಾಳ ದುರಂತ ಕೊರೆಯುತ್ತಾ ಇರುತ್ತದೆ. ಅವಳಂತೂ ಇಲ್ಲಿದ್ದರೆ ಖಂಡಿತಾ ಚೇತರಿಸಿಕೊಳ್ಳುವುದಿಲ್ಲ.

ಶೇಷ:– ಒಂದು ವಿಧದಿಂದ ಅದೂ ಸರಿ. ಯಾವುದಕ್ಕೂ ಈಗ ಮನೆಗೆ ನಡೆ. (ಕರೆದುಕೊಂಡು ಹೋಗುವನು.)

[ಪೂರ್ವಸ್ಮರಣೆ 'ಫ್ಲೇಶ್ ಬೇಕ್' (Flash Back) ಮುಗಿದುದು. ರಂಗದಲ್ಲಿ ಮೊದಲಿನ ಬೆಳಕು.]

— ತೆರೆ —

ವಿ ರಾ ಮ

# ನೋಟ ೭

[ಮೂರನೇ ದೃಶ್ಯದಲ್ಲಿ ಸೂಚಿಸಿದ ಮನೆ. ಸನಾತನಿ, ವಿಶ್ವನಾಥ, ಆದಿ-ಮೂರ್ತಿ, ಪ್ರಭಾಕರ ಮತ್ತು ಪ್ರಕಾಶ್ ಕುಳಿತಿದ್ದಾರೆ.]

ವಿಶ್ವನಾಥ:- ಸಂಜೆ ಐದು ಗಂಟೆಯಾದರೂ ಮುಖ್ಯ ಆಸಾಮಿಯೇ ಇಲ್ಲ. ಎಲ್ಲಪ್ಪಾ ನಿನ್ನ ಚಂದ್ರೂಭಾಯಿ?

ಆದಿಮೂರ್ತಿ:- ನನ್ನನ್ನೇ ನೋಡಿ ಕೇಳ್ತಾ ಇದ್ದೀಯಲ್ಲ?

ವಿಶ್ವ:- ಹೌದು ಮತ್ತೆ! ನಿನಗಲ್ಲವೇ ಅವನ ಹೊಣೆ ವಹಿಸಿದ್ದು? ನಿನ್ನೆ; ಈ ದಿನ ಮುಂಜಾನೆ ಎಲ್ಲಾ ನಿನ್ನ ಮನ್ಯಾಗೇ ಇದ್ದನಂತೆ.

ಆದಿ:- ಇದ್ದದ್ದು ನಿಜ. ಆದರೆ ಒಮ್ಮೆಲೇ ಎದ್ದುಹೋದ. ನಮ್ಮ ಮಾವನವರು ಯಾವುದೋ ಹಿಂದಿನ ಅನುಭವ ಹೇಳುತ್ತಿದ್ದರು.

ಸನಾ:- ಅದನ್ನು ಕೇಳುತ್ತಿದ್ದಂತೆ ಇಂಗು ತಿಂದ ಮಂಗ ಎದ್ದೋಡಿಬಿಟ್ಟ ಎಂದ ಹಾಗೆ ಅವಸರದಿಂದ ಓಡಿದ. ಏನೇ ಇರಲಿ, ಸ್ವಾರಸ್ಯ ವಾಗಿತ್ತು ಕಣೋ ನಿಮ್ಮ ಮಾವನ ಕಥೆ.

ಆದಿ:- ಸ್ವಾರಸ್ಯ? ಹುಂ. ನಿಜ ನಿಜ, ಬ್ರಹ್ಮಚಾರಿಗೆ ಪುತ್ರಶೋಕವೂ ಒಂದು ತಮಾಷೆಯೇ. ನಿಜಕ್ಕೂ ನೀನು ಶ್ರೀರಾಮನ ಭಕ್ತನೇ.

ಸನಾ:- ಮಂಗ ಅಂತ ವ್ಯಂಗ್ಯ ಆಡಬೇಡ. ಆ ವಜ್ರಮುಷ್ಟಿಯೂ ನನ್ನಲ್ಲಿದ್ದೀತು.

ವಿಶ್ವ:- ಎಷ್ಟು ಬೇಗನೇ ಸಿಟ್ಟು ಬಂದುಬಿಡುತ್ತಿದೆ ನಮ್ಮ ಸನಾತನಿಗೆ.

ಸನಾ:- ಅಲ್ಲದ್ದು ಹೇಳಿದರೆ ಯಾರಿಗಾದರೂ ಸಿಟ್ಟು ಬಂದೇ ಬರುತ್ತದೆ. ಆದರೆ ನಾನೇನೂ ಸಿಟ್ಟಿನಿಂದ .. ....

ಪ್ರಭಾಕರ:- ಹೋಗಲಿ ಬಿಡಿ. ಈಗ ನಮ್ಮ ವಿಚಾರ ಮಾತಾಡೋಣ.

ವಿಶ್ವ:- ಮದುಮಗನೇ ಇಲ್ಲದೆ ಮದುವೆ ಹೇಗಾಗ್ತದೆ? ಅಪರಾಧಿಯೇ ಇಲ್ಲದೆ ತೀರ್ಪು ಹೇಳಿ ಫಲ ಏನು?

ಆದಿ:- ಅಂದರೆ ಚಂದ್ರು ಅಪರಾಧಿಯೇ?

ಸನಾ;- ಸಂದೇಹವೇನು? ಈಗ ತಪ್ಪಿಸಿಕೊಂಡಿದ್ದೇ ಅದಕ್ಕೆ ಪ್ರಮಾಣ. ಕೊಳ್ಳೆಹೊಡೆಯುವವರಿಗೆ ಒಳ್ಳೆ ಮಾತು ಎಲ್ಲಿ ಹಿಡಿಸುತ್ತದೆ?

ಪ್ರಭಾ;- ಸರಿಯಾಗಿ ಹೇಳಿದಿರಿ; ಮನೆ ಮುರಿಯಲು ಬಂದವರಿಗೆ........

ಪ್ರಕಾಶ್:- ಪಟಿಪ್; ನನಗೂ ಈ ಮಾತು ನಾಟುತ್ತದೆ.

ಪ್ರಭಾ;- ಕುಂಬಳಕಾಯಿ ಕಳ್ಳ ಎಂದರೆ ಯಾರೋ ಹೆಗಲು ಮುಟ್ಟಿಕೊಂಡರಂತೆ.

ಪ್ರಕಾಶ್:- ಈಗ ಎದೆ ಮುಟ್ಟಿ ನೋಡಿಕೋ ಗಟ್ಟಿ ಇದೆಯೋ ಎಂತ.

ವಿಶ್ವ;- ಹಾಂ! ಸಮಾಧಾನ! ಇಲ್ಲಿ ನಾವಿದೀವಿ.

ಸನಾ;- ಕೇವಲ ಇದ್ದುದರಿಂದ ಏನು ಬಂದ ಹಾಗಾಯಿತು? ಒಂದು ನಿರ್ಣಯಕ್ಕೆ ಬಾರದೆ ಸುಮ್ಮನೆ ಮಾತು ಬೆಳೆಸಿದ್ದರಿಂದ ಯಾವ ಫಲವೂ ಇಲ್ಲ.

ವಿಶ್ವ;- ನನ್ನ ಅಭಿಪ್ರಾಯದಾಗ ಅಂದ್ರೆ ನಾ ಹೇಳೂದು ಅಂದ್ರೆ ನ್ಯಾಯ ಪ್ರಕಾರ ಈ ಅಣ್ಣ ತಮ್ಮಂದಿರೊಳಗೆ ವಿಭಾಗ ಆಗ್ಬೇಕು.

ಪ್ರಭಾ;- ಉಹುಂ ಬೆವರಿಳಿಸಿ ಹೊಲ ಮನೆ ಉಳಿಸಿದವನು ನಾನು.

ಪ್ರಕಾಶ್:- ನಾನೂ ಓದಲು ಹೋಗದೆ ಇಲ್ಲೇ ಇರುತ್ತಿದ್ದರೆ ಇದೇ ಮಾತನ್ನು ಹೇಳುತ್ತಿದ್ದೆ.

ಸನಾ;- ನೀನು ಓದಿದರೆ ಅದು ನಿನ್ನೊಬ್ಬನಿಗಾಯ್ತು. ನಿನ್ನ ಸಂಬಳ ನಿನ್ನ ಸಂಸಾರಕ್ಕಾಯಿತು. ಈ ಮನೆಗೆ ನಿನ್ನ ಪಿತ್ರಾರ್ಜಿತವಾದ ನೆಲಕ್ಕೆ ನೀನು ಯಾವ ಸೇವೆ ಸಲ್ಲಿಸಿದ ಹಾಗಾಯಿತು?

ಪ್ರಕಾಶ್:- ಇಷ್ಟರ ತನಕ ನನಗೆ ಈ ಅವಕಾಶವೇ ಸಿಗಲಿಲ್ಲ. ಈಗ ಪರದೇಶದ ಅನುಭವ ಪಡೆದಿದ್ದೇನೆ. ದೂರದಲ್ಲಿದ್ದುಕೊಂಡೇ ಊರ ಉಸಾಬರಿ ನೋಡಿಕೊಳ್ಳಬಲ್ಲೆ.

ಆದಿ;- ಇಂಗ್ಲಿಷರು ಭಾರತವನ್ನು ಆಳಿದ ಹಾಗೆ. ತಾವು ಹೋದರೂ ಅನುನಾಯಿಗಳನ್ನು ಉಳಿಸಿದ್ದಾರೆ.

ಸನಾ;- ಅನುನಾಯಿ ಅಲ್ಲ, ಅನುಯಾಯಿ.

ಪ್ರಕಾಶ್.- ನಿಮ್ಮೊಡನೆ ನಾನು ವಾದಿಸುವುದಿಲ್ಲ ಇದ್ದ ವಿಚಾರ ಹೇಳಿದ್ದೇನೆ. ಈ ಮನೆತನಕ್ಕೆ ಹೊಸರೂಪ ನನ್ನಿಂದ ಬಂದಿದೆ ನಾನು ಇಲ್ಲಿನವನು. ಹಳೆಯ ಈ ಮನೆಯಲ್ಲಿ ನನಗೂ ನೆಲೆ ಬೇಕು.

ವಿಶ್ವ;- ನ್ಯಾಯ ಪ್ರಕಾರ ನಿನಗೆ ನಾಲ್ಕನೇ ಒಂದಂಶ ಸಲ್ಲುದೆ.

ಪ್ರಕಾಶ್;- ಅಷ್ಟಾದರೆ ಅಷ್ಟು. ಲೆಕ್ಕಪತ್ರ ನೋಡಿ ಹಿಸೆಪತ್ರ ಸಿದ್ಧಗೊಳಿಸಿ. ನಾನು ಸ್ವಲ್ಪ ವಾಕಿಂಗ್ ಹೋಗಿ ಬರುತ್ತೇನೆ.

ಸನಾ:- ಯಾಕೆ? ಪಕ್ಷಪಾತ ಎಂತ ಆ ಮೇಲೆ ಆಕ್ಷೇಪ ಎತ್ತೋದಕ್ಕೇನು?

ಪ್ರಭಾ;- ನೋಡಿದಿರಾ? ಇವರಿಗೆ ಒಬ್ಬರಿಗೂ ಹೊಣೆ ಬೇಡ. ಅಪ್ಪನ ಹೆಣಾ ಹೊರೋದಕ್ಕೂ ಇವರು ಸಿಗಲಿಲ್ಲ. ಈಗ ಪಾಲು ಮಾತ್ರ ಬೇಕು. ಒಳ್ಳೆಯ ದಾಯಾದಿಗಳು.

ಸನಾ;- ಏನು ಮಾಡೋದು? ಕಾಲವೇ ಹಾಗೆ ತಿರುಗಿದೆ. ಮರದ ಬೇರು ನೆಲದೊಳಗಿರುತ್ತೆ ಕೊಂಬೆ ಎಲೆ ಎದ್ದು ಕಾಣುತ್ತೆ. ಆದರೂ ಒಂದನ್ನು ಬಿಟ್ಟು ಇನ್ನೊಂದು ಉಳಿಯಲಾರದು. ಸಂಸಾರವೃಕ್ಷದಲ್ಲಿ ಈ ಐಕ್ಯ ಕಾಣದಿದ್ದರೂ ಅಗಲಿ ಬಾಳುವ ಹಾಗಿಲ್ಲ. ಇವರನ್ನು ಬಾಳಿಸುವ ಹೊಣೆ ನಿನ್ನದು. ಹಿರಿಯಣ್ಣ ಎಂದರೆ ಮನೆಗೆ ಮೆಟ್ಟಿಲು ಇದ್ದ ಹಾಗೆ. ಎಲ್ಲರಿಂದ ತುಳಿಸಿಕೊಂಡರೂ ಸಹಿಸಿಕೊಳ್ಳಬೇಕು. ಆದಕ್ಕೇ ನಮ್ಮ ಭಾರತದಲ್ಲಿ ವಾಸ್ತುಪೂಜೆ. ದಿನ ಬೆಳಗಾದರೆ ಮೊದಲ ಪೂಜೆ ಹೊಸಲಿಗೆ.

ಪ್ರಭಾ;- ಅಷ್ಟಕ್ಕೇ ಅನುಭವಿಸಬೇಕಲ್ಲ ಎಲ್ಲರ ಪಾದಗಳಿಂದಲೂ ತುಳಿತದ ನಿತ್ಯಪೂಜೆಯನ್ನ! ಈ ಚಂದ್ರುವಾಗಲಿ ಪ್ರಕಾಶ್ ಆಗಲಿ ನನ್ನ ಒಡಹುಟ್ಟುಗಳಾಗಿರೋದು ನಿಜ. ಆದರೆ ಇಲ್ಲಿ ಅವರಿಬ್ಬರಿಂದಲೂ ಈ ತನಕ ಏನೂ ಆಗಿಲ್ಲ. ಮುಂದೆ ಆಗುವ ನಿರೀಕ್ಷೆಯೂ ಇಲ್ಲ. ಆದ್ದರಿಂದ ಈ ಅಭಿಪ್ರಾಯವನ್ನು ಸ್ಪಷ್ಟಪಡಿಸಿ ಇವರನ್ನು ಊರು ಬಿಡಿಸಿ ಓಡಿಸಿದರೆ ದೊಡ್ಡ ಉಪಕಾರವಾಗುತ್ತದೆ.

ವಿಶ್ವ:- ಮಾತಿನ ಬಲೆಯನ್ನು ಒಳ್ಳೆ ಬೆಸ್ತನ ಹಾಗೆ ಸುತ್ತಿ ಸುತ್ತಿ ಬಿಡಿಸಿದೆ ಪ್ರಭಾಕರ್. ಹೋದವರು ಹೋದರು, ಹೊರಗಿನವರು ಹೊರಗೆ

ಎನ್ನುವ ನೀತಿ ಕೂಡದೆಂದು ನಿನ್ನೆಯೇ ಹೇಳಿದೆ. ಚಂದ್ರುವಿನ ವಿಚಾರವನ್ನು ನಾನು ಹೇಳಲಾರೆ. ಆದರೆ ಪ್ರಕಾಶನ ಬಗ್ಗೆ ತಿರಸ್ಕಾರ ಸಲ್ಲದು. ಉಳುವವನನ್ನು ಹೊಲದೊಡೆಯ ಎನ್ನುವಂತೆ ದುಡಿದವನಿಗೆ ಮನೆಮಾರು ಎನ್ನುವ ನಿನ್ನ ಮಾತು ಸರಿಯಲ್ಲ. ರೈತ ಪರಿಶ್ರಮಿಯೂ ಹೌದು, ಅನ್ನದಾತನೂ ಹೌದು. ಆದರೆ ಆತನೇ ಲೋಕಾಧಾರವಲ್ಲ; ಅನೇಕ ಅಂಗಗಳು ಸೇರಿ ದೇಹವಾದಂತೆ ವಿವಿಧ ವರ್ಗದ ಕೆಲಸಗಾರರಿಂದ ಈ ಲೋಕ ನಡೆಯುತ್ತದೆ. ನಿನ್ನ ತಮ್ಮ ಪ್ರಕಾಶ್ ಹೊಲಮನೆಗಳಿಗೆ ಅಂಟಿಕೊಳ್ಳದೆ ವಿದ್ಯಾಕ್ಷೇತ್ರದಲ್ಲಿ ಮುಂದುವರಿದು ಯಾವುದೋ ಉದ್ಯಮದಲ್ಲಿ ತನ್ನ ಜೀವನವನ್ನು ಸಾಗಿಸುತ್ತಿದ್ದಾನೆ. ಇದಕ್ಕೆ ನೀನೂ ನಾವೂ ಹೆಮ್ಮೆಪಡಬೇಕು. ಜೀವನಕ್ಕೆ ಬೇರೆ ದಾರಿಯಿದ್ದರೂ ಪಿತ್ರಾರ್ಜಿತದಲ್ಲಿ ಆತನು ಅವಕಾಶವನ್ನು ಕೇಳುತ್ತಿರುವುದು ಆತನ ಅಭಿಮಾನಕ್ಕೆ ಪ್ರಮಾಣ. ಅತಿಯಾಸೆ ಎನ್ನಬಹುದು ನೀನು. ಇಲ್ಲಿ ಅಂಥಾದ್ದು ಏನೂ ಇಲ್ಲ ಎನ್ನುವುದು ಅವನಿಗೂ ತಿಳಿಯದಿಲ್ಲ. ಓದಿದ ಆತನಿಂದ ನಿನಗೆ ಲಾಭವಾಗದಿರಬಹುದು. ಆದರೆ ಊರಮಂದಿ ಹೊಸ ದೃಷ್ಟಿಯನ್ನು ಪಡೆದು ಹೊಸ ಬಗೆಯ ಸುಧಾಂತ ಜೀವನವನ್ನು ಕಾಣುವಂತಾಗಿದೆ. ನೀನು ಇದ್ದುದನ್ನು ಕೊಟ್ಟು ಆತನನ್ನು ಗೌರವಿಸಬೇಕು.

ಸನಾ;– ಪ್ರಕಾಶನ ಹೊಸ ದೃಷ್ಟಿ ಹೊಸ ಸುಧಾರಣೆ ಎನ್ನುವುದು ಪರದೇಶದ ಅನುಕರಣೆ.

ಪ್ರಭಾ;– ಈ ಮನೆಯನ್ನೇ ಕೆಡವಿ ಹೊಸ ಬಂಗಲೆ ಕಟ್ಟಿಸಬೇಕಂತೆ. ಪ್ರತಿಯೊಂದನ್ನೂ ಬದಲಾಯಿಸಿ ನಮ್ಮ ಕರಿಚರ್ಮ ಬಿಳಿಚರ್ಮವಾಗಿ....

ಆದಿ;– ಸಾಕು, ಸಾಕು. ಅಪ್ರಸ್ತುತ ವಿಚಾರಗಳನ್ನು ಚರ್ಚಿಸಹೊರಟಿದ್ದೀರಿ. ಇಲ್ಲಿ ಕುಳಿತವರಿಗೆ ಬೇರೆ ಕೆಲಸವಿಲ್ಲಾಂತ ಮಾಡಿದ್ದೀರೇನು? ಅಥವಾ ಏನು ಹೇಳಿದರೂ ಕೇಳಲೇ ಬೇಕಾಗಿದ್ದಕ್ಕಾಗಿ ಭಾಷಣದ ಬಾಣಗಳನ್ನು ಹೊಡುತ್ತಾ ಇದ್ದೀರೋ?

ವಿಶ್ವ;- ವಿಷಯದ ವಿಮರ್ಶೆಗೆ ಬಹಳಷ್ಟು ಮಾತಾಡಲೇ ಬೇಕಾದಾಗ ನಿಮಗೆ ಮಾತು ಬೇಡಾಂದ್ರ ಕೃತಿ ಆಗಲಿ.

ಸನಾ;- ಯಾವ ಕೃತಿ?

ವಿಶ್ವ;- ವಿಭಾಗ.

ಆದಿ;- ಅಂದರೆ ಮನೆ ಒಡೆಯುವುದಕ್ಕೇ ನಾವು ಸೇರಿದ ಹಾಗಾಯಿತು. ಅವಿವೇಕಿಗಳು, ಪುಡಾರಿಗಳು ಸಣ್ಣ ವಿಚಾರವನ್ನು ದೊಡ್ಡದು ಮಾಡಿ ಗಲಭೆಯೆಬ್ಬಿಸಲು ಮುನ್ನುಗ್ಗುವಂತೆ ಜಗಳ ತಪ್ಪಿಸಿ ರಗಳೆ ತಂದಿಡೋದು ಸರಿಯಲ್ಲ, ಇವರು ಕೂಡಿ ಬಾಳಬೇಕು.

ಸನಾ;- ಇದು ಆಡುವ ಮಾತು, ಮಾಡುವುದಕ್ಕಲ್ಲ. ಸಿಡಿಮದ್ದಿಗೆ ಕಿಡಿಯಿಟ್ಟು ತಡಕೋ ಎಂದರೆ ತಡೆದೀತೇ? ರಾಮಾಯಣದಲ್ಲಿ ಅಣ್ಣ ತಮ್ಮಂದಿರು ಅನ್ಯೋನ್ಯವಾಗಿದ್ದರೆ ಭಾರತದಲ್ಲಿ ಅವರೇ ದಾಯಾದಿಗಳಾಗಿ ಕುರುಕ್ಷೇತ್ರ ಮಾಡಿದರು. ಸೀತೆ ಮಂಡೋದರಿಯರು ತ್ರೇತಾಯುಗದಲ್ಲಿದ್ದರೆ, ಗಂಡರೋ ಷಂಡರೋ ಎನ್ನುವ ದ್ರೌಪದಿ ದ್ವಾಪರದಲ್ಲಿ ಬಂದಳು. ಇದು ಕಲಿಯುಗ. ಭಾರತದ ಮನೆ ಮನೆಯಲ್ಲೂ ಅಣ್ಣತಮ್ಮಂದಿರ ಮಹಾಭಾರತ ಪುನರಾವರ್ತನೆಯಾಗುತ್ತದೆ.

ಆದಿ;- ಆಗಲಿ, ನ್ಯಾಯ ಅನ್ಯಾಯಗಳ ದ್ವಂದ್ವ ನಡೆಯಲೇ ಬೇಕು. ಕೌರವ ಪಾಂಡವರಲ್ಲಿ ಹೊಗೆಯಾಡಿದರೂ ಹಗೆಗಳ ಮುಂದೆ ಹಿಂದಾದರು. ಧರ್ಮರಾಜನ ಒಂದು ಮಾತು ಇಂದಿಗೂ ಸತ್ಯವಾಗಿದೆ. ಯಾವುದು ಗೊತ್ತೆ? "ನಮ್ಮೊಳಗೆ ವಿವಾದವಾದರೆ ನಾವು ಐವರು ಅವರು ನೂರು ಮಂದಿ, ಬೇರೆಯವರ ಮುಂದೆ ನಾವು ನೂರೈದು ಮಂದಿ". ಇದು ಬಿಕ್ಕಟ್ಟಿನ ಭಾರತದ ಮೂಲಭೂತ ಒಕ್ಕಟ್ಟು. ನಮ್ಮ ಸ್ವಾತಂತ್ರ್ಯ ಸಮರ ಇದಕ್ಕೆ ಪ್ರಮಾಣ. ಚೀನಿಯರ ಆಕ್ರಮಣವಾದಾಗ ಪಕ್ಷ, ಪ್ರಾಂತ, ಜಾತಿಗಳ ಕಚ್ಚಾಟ ತಾನಾಗಿ ಮುಚ್ಚಿಹೋಗಿ ಎಲ್ಲರಲ್ಲಿಯೂ ಒಂದೇ ಕೆಚ್ಚೆದೆ ಮೂಡಿತು.

ಸನಾ;- ಈಗ ಮತ್ತೆ ತಿಕ್ಕಾಟ ತೊಡಗಿತಲ್ಲ?

ಆದಿ;- ಅದನ್ನು ತಡೆಗಟ್ಟಲು ಪ್ರತಿಯೊಬ್ಬರೂ ಪ್ರಯತ್ನಿಸಬೇಕು. ಇಡೀ ದೇಶವೇ ಒಂದು ಮನೆ.

ಸನಾ;- ನಿನ್ನ ಮನೆಗೆ ಮಾತ್ರ ಅಡ್ಡಗೋಡೆ ಹಾಕಿ ಬೇರ್ಪಡಿಸಿಕೊಂಡಿದ್ದಿ.

ಶೇಷ;- ಭೇಷ್! ಬಾಡಕ್ಕೆ ಬಂತು ಕೊಡಲಿ.

ಆದಿ;- ನಾನು ಗೋಡೆ ಹಾಕಿಸಿದ್ದು ಅಂಗಳದ ಬೆಳೆಯ ರಕ್ಷಣೆಗಾಗಿ. ಎಲ್ಲರ ಸಂಸಾರವೂ ಒಂದೇ ಎಂದ ಮಾತ್ರಕ್ಕೆ ಊಟ ವಸತಿಯೂ ಒಟ್ಟಾಗಿ ಇರಬೇಕಾಗಿಲ್ಲ. ಬೇರೆ ಬೇರೆ ಉಂಡರೂ ಉಣ್ಣುವ ಅನ್ನ ಒಂದೇ, ಕುಡಿಯುವ ನೀರು ಒಂದೇ, ಉಸಿರಾಡುವ ಗಾಳಿ ಒಂದೇ.

ಸನಾ;- ಇರುವ ನೆಲ ಒಂದೇ, ತೋರುವ ಆಕಾಶ ಒಂದೇ. ದೇಹ ಬೇರಾದರೂ ಮನುಷ್ಯರೆಲ್ಲರೂ ಒಂದೇ. ಜೀವಿಗಳೆಲ್ಲವೂ ಒಂದೇ, ಸಾಕೇನು ಐಕ್ಯಪಾಠ? ನಾಳೆನಿಂದ ನಿನ್ನ ಮನೆಯಲ್ಲೇ ನನ್ನ ಠಾಣೆ! ಹಾಕು ಅನ್ನ.

ಆದಿ;- ಧಾರಾಳವಾಗಿ! ನನ್ನಂತೆ ನೀನೂ ದುಡಿದು ತಂದು ಹಾಕು. ಬೇಯಿಸಿ ಕೊಡುವುದಕ್ಕೆ ಜನ ಮಾಡು. ಒಂದೇ ಹಂತಿಯಲ್ಲಿ, ಬೇಕಾದರೆ ಒಂದೇ ತಟ್ಟೆಯಲ್ಲಿ ಊಟ ಮಾಡೋಣ.

ವಿಶ್ವ;- ದುಡಿದು ಉಣ್ಣುದಕ್ಕೆ ಯಾರೂ ಹೇಳುವ ಅಗತ್ಯವಿಲ್ಲ. ದುಡಿಮೆ ಸಿಗದವನು ದುಡಿಯಲಾರದವನನ್ನು ಏನು ಮಾಡಬೇಕು?

ಆದಿ;- ಅದು ಸಂಬಂಧಪಟ್ಟವರಿಗೆ ಸಂಬಂಧಿಸಿದ್ದು.

ಸನಾ;- ಅಂದರೆ?

ಆದಿ;- ಮೊದಲು ಹತ್ತಿರದ ಸಂಬಂಧಿಕರು, ಆ ಮೇಲೆ ಸಾರ್ವಜನಿಕರು ವಿಚಾರಿಸಬೇಕು.

ಪುಥಾ;- ಈಗ ನಮ್ಮ ವಿಚಾರ ಹೇಳಿ.

ಆದಿ;- ಇಷ್ಟರ ತನಕ ತಂದೆಯೊಂದಿಗೆ ನೀನೊಬ್ಬನೇ ಈ ಮನೆಯನ್ನು ನೋಡಿಕೊಳ್ಳುತ್ತಿದ್ದಿ. ಈಗ ದೂರ ಹೋದ ತಮ್ಮಂದಿರು ಮರಳಿ

ದ್ದಾರೆ. ತಂದೆ ಸತ್ತ ನಂತರ ನೀನೇ ಈ ಮನೆಯ ಹಿರಿಯ ಗಂಡಸು. ಕಿರಿಯರನ್ನು ನಡೆಯಿಸಿಕೊಂಡು ಹೋಗಬೇಕು.

ಪ್ರಭಾ;- ನಡೆಯಿಸುವಷ್ಟು ಚಿಕ್ಕವರಲ್ಲ ಅವರು. ಸಂಸಾರ ಕಟ್ಟಿಕೊಂಡ ಧಾಂಡಿಗರು. ನಾನು ಹೇಳಿದಂತೆ ಕೇಳುವವರಲ್ಲ. ಮನೆ ಒಡೆಯಲು ತಾಯಿ ಒಪ್ಪುವುದಿಲ್ಲ. ನನಗೂ ಇಷ್ಟವಿಲ್ಲ. ಮನೆಯನ್ನು ಹಾವುಗಳ ಹುತ್ತವಾಗಿ ಮಾಡಿ ಬಾಳುವುದು ಹೇಗೆ? ಅದಕ್ಕೇ ಇಬ್ಬರನ್ನೂ ಕಳುಹಿಸಿ ಬಿಡಿ. ರೆಕ್ಕೆ ಬಲಿಯುವ ತನಕ ಚಿಕ್ಕವನು ಮಾತ್ರ ಇಷ್ಟವಿದ್ದರೆ ಇರಲಿ.

ವಿಶ್ವ;- ನೀನು ಹೇಳಿದ್ದನ್ನೇ ಮತ್ತೆ ಹೇಳಬೇಡ. ತಂದೆಗೆ ಎಲ್ಲಾ ಮಕ್ಕಳೂ ಸಮ. ಪ್ರಕಾಶ್ ತಾನೇ ಮನೆಯಲ್ಲಿರುತ್ತಾನೆ. ನೀನು ಹೋಗು ಎನ್ನುತ್ತಾನೆ, ಹೊರಡುತ್ತೀಯೇನು?

ಪ್ರಭಾ;- ಅದು ಹೇಗೆ ಸಾಧ್ಯ? ಸಂಸಾರವಾದರೂ ಹೇಗೆ ಸಾಗಬೇಕು? ಪ್ರಕಾಶನನ್ನು ಓದಿಸಿದ್ದೇನೆ. ಅವನಿಗೆ ಉದ್ಯೋಗವಿದೆ. ನನಗೇನಿದೆ?

ಆದಿ;- ಚಂದ್ರುವಿಗೆ ಏನಿದೆ?

ಪ್ರಭಾ;- ಅವನು ಮನೆ ಬಿಟ್ಟು ಓಡಿಹೋದವನು. ತಂದೆಗೆ ಅವನನ್ನು ಕಂಡರೆ ಆಗದು. ಇದರಲ್ಲಿ ಅವನಿಗೆ ಏನೂ ಇಲ್ಲ ಎಂದು ಹೇಳಿ ಬಿಟ್ಟಿದ್ದಾರೆ.

ಮುದುಕಿ;- (ಥಟ್ಟನೆ ಕೂಗುತ್ತ ಬರುವಳು) ಸುಳ್ಳು, ಶುದ್ಧ ಸುಳ್ಳು, ಚಂದ್ರುವಿಗಾಗಿ ಅವರು ಮರುಗುತ್ತಿದ್ದರು. ಪರದೇಶಿಯಾಗಿ ಎಲ್ಲಿ ಪರದಾಡುತ್ತಿದ್ದಾನೋ ಎಂದು ಚಿಂತಿಸುತ್ತಿದ್ದರು. ಆ ಚಿಂತೆಯಲ್ಲಿಯೇ ನಿತ್ಯ ಉಪವಾಸ. ಕೊನೆಗೆ ಹಾಸಿಗೆ ಹಿಡಿದು ಬಿಟ್ಟರು. ಅವರ ಪ್ರಾರ್ಥನೆ ದೇವರಿಗೆ ಕರುಣೆ ಹುಟ್ಟಿಸಿತೋ ಏನೋ? ಇಪ್ಪತ್ತು ವರುಷದ ಮೇಲೆ ಒಂದು ದಿನ ಹೆಂಡತಿಯೊಂದಿಗೆ ಬಂದ. ಇವರು ನಿತ್ರಾಣದಲ್ಲಿ ತ್ರಾಣ ಬಂದಂತೆ ಗೆಲುವಾಗಿ ಓಡಾಡಿದರು. ಆದರೆ.... ಮರುದಿನ ಇದ್ದಕ್ಕಿದ್ದಂತೆ ಅದೇನಾಯಿತೋ?

ಪೃಥಾ;- ಆಗೋದೇನು? ಇವನ ಹೆಂಡತಿ ಮುಸಲ್ಮಾನಿ. ಇವನು ಪತಿತ ಎಂದು ತಿಳಿದು ಎದೆಯೊಡೆದು ಮಡಿದರು. ಪಿತೃಘಾತಕಿ ಆತ.

ವಿಶ್ವ;- ಹೇ, ಹಂ, ಆ ಶಬ್ದ ಉಪಯೋಗಿಸಬಾರದು. ಬಹಳ ಕಾಲ ದಿಂದ ಹಾಸಿಗೆ ಹಿಡಿದಿದ್ದ ಮುದುಕನ ಮರಣಕ್ಕೆ ಕಾಲವೇ ಹೊಣೆ ಮಗ ಸೊಸೆ ಬಂದಾಗ ಆನಂದ ಸಹಜ.

ಪೃಥಾ;- ಆ ಆನಂದದ ಜೊತೆಗೆ ಉಂಟಾದ ಆಘಾತ ಅಪಘಾತವನ್ನು ಉಂಟುಮಾಡಿತು.

ಮುದುಕಿ;- ಚಂದ್ರುವಿನ ವಿಚಾರವಾಗಲೀ ಅವನ ಹೆಂಡತಿಯ ವಿಚಾರ ವಾಗಲೀ ನಮಗೆ ಯಾರಿಗೂ ಸರಿಯಾಗಿ ಗೊತ್ತಾಗಲಿಲ್ಲ. ಇಬ್ಬ ರಿಗೂ ನಮ್ಮ ಮಾತು ಬರುವುದಿಲ್ಲ. ಅಂಥವರು ಬಂದ ಒಂದೇ ದಿನದಲ್ಲಿ ಇವರಿಗೆ ಹೇಗೆ ತಿಳಿಯಬೇಕು? ತಂದೆ ಮಗ ಇಬ್ಬರೂ ಬಿಗಿಯಪ್ಪಿ ಕಣ್ಣೀರಿಡುತ್ತಿದ್ದರಲ್ಲದೇ ಹೆಚ್ಚಿನ ಮಾತುಕತೆಯೇ ನಡೆ ಯಲಿಲ್ಲ. ಇವರು ಹೋಗಿ ತಿಂಗಳಾಯಿತು. ಆ ಮೇಲೆ ಎಲ್ಲರೂ ತಮ್ಮತಮ್ಮಷ್ಟಕ್ಕೇ ಇದ್ದರು. ಹಿರಿಯ ಸೊಸೆ ಅಡಿಗೆ ಮಾಡಿ ತಟ್ಟೆ ಹಾಕಿ ಕರೆದರೆ ಎಲ್ಲರೂ ಒಟ್ಟಾಗಿ ಉಣ್ಣುತ್ತಿದ್ದರು. ಚಂದ್ರು ನನ್ನ ಹತ್ತಿರ ಬರುತ್ತಾನೆ. ಏನೋ ಹೇಳಲು ಯತ್ನಿಸುತ್ತಾನೆ. ಜೊತೆಗೆ ಅಳುತ್ತಾನೆ. ಅವನ ಹೆಂಡತಿಯಂತೂ ಮೂಕಿಯೆಂಬಷ್ಟು ಮೌನವಾಗಿದ್ದಾಳೆ. ಇಬ್ಬರ ಕಥೆಯೂ ತಿಳಿಯದಾಗಿದೆ.

ಸನಾ;- ನಮ್ಮ ಆದಿಮೂರ್ತಿಗೆ ತಿಳಿದಿರಬೇಕು. ನಿನ್ನೆ ಆ ಹೊಣೆಯನ್ನು ಇವನಿಗೇ ವಹಿಸಲಾಗಿತ್ತು. ಆ ಪ್ರಕಾರ ಇಬ್ಬರೂ ನಿನ್ನೆ ಸೇರಿ ದ್ದರು. ಈ ದಿನ ಬೆಳಗ್ಗೆಯೂ ಚಂದ್ರು ಆದಿ ಮನೆಗೆ ಬಂದಿದ್ದ. ಏನಪ್ಪಾ ಆತನ ವಿಚಾರ ಯಾಕೆ ಅದನ್ನು ಮುಚ್ಚಿಟ್ಟಿದ್ದೀ?

ಆದಿ;- ಮುಚ್ಚಿಟ್ಟಿಲ್ಲ, ಬಾಯಿ ಬಿಚ್ಚುವುದಕ್ಕೆ ನೀವೆಲ್ಲಾ ಅವಕಾಶ ಕೊಟ್ಟ ರಲ್ಲವೇ ಹೇಳೋದು. ಅಲ್ಲದೆ ಅವನೂ ಇಲ್ಲಿಲ್ಲ. ಹಾಗಾಗಿ

ವಿಶ್ವ;- ಸಂಬಂಧಪಡದ ತತ್ವೋಪದೇಶಕ್ಕೆ ಅವಕಾಶ ತೆಗೆದುಕೊಂಡ ವ್ಯಕ್ತಿಗೆ ಬಾಯಿ ಬಿಚ್ಚಲು ಅವಕಾಶವಾಗಲಿಲ್ಲವಂತೆ. ಹುಂ, ಹೋಗಲಿ ಈಗಲಾದರೂ ಹೇಳಬಹುದಲ್ಲ.

ಆದಿ;- ಈ ಪ್ರಭಾಕರ ಹೇಳುವಂತೆ ಅಥವಾ ಇತರರು ತಿಳಿದಿರುವಂತೆ ಚಂದ್ರು ದುಷ್ಟನೂ ಅಲ್ಲ, ಭ್ರಷ್ಟನೂ ಅಲ್ಲ. ಹತ್ತು ವರ್ಷದವ ನಿದ್ದಾಗಲೇ ಆತನು ಮನೆಬಿಟ್ಟು ಹೋದನಂತೆ.

ಮುದುಕಿ;- ಯಾಕೆ ಹೋದನಂತೆ?

ಆದಿ;- ಯಾಕೆ ಎಂಬುದು ಆತನಿಗೆ ಮರೆತುಹೋಗಿದೆ. ತಂದೆ ಊರ ಲ್ಲಿಲ್ಲದಾಗ ಅಣ್ಣ ಏನೋ ಅಂದನಂತೆ. ಅದಕ್ಕೆ ಬೇಸರಪಟ್ಟು ಕೊಂಡು ಎಲ್ಲಾದರೂ ಹೋಗೋಣ ಎಂತ ನಡೆದ.

ಪ್ರಭಾ;- ಅವನನ್ನು ಅಪ್ಪನೇ ಹೊರಗೆ ಹಾಕಿದ್ದರು.

ಮುದುಕಿ;- ಉಹುಂ, ಇವರು ಯಾವುದೋ ಊರಿಗೆ ಕೆಲಸದ ಮೇಲೆ ಹೋಗಿದ್ದರು. ಅದೇ ಸಂದರ್ಭದಲ್ಲಿ ಅಣ್ಣ ತಮ್ಮ ಜಗಳಾಡಿ ಕೊಂಡರು. ಹಾಗೆ ಹೋದ ಹುಡುಗ ಈಗ ತಿಂಗಳ ಹಿಂದೆ ಬಂದ.

ಆದಿ;- ಬರಿಗೈಯಲ್ಲಿ ಹೊರಟ ಹತ್ತು ವರ್ಷದ ಹುಡುಗನಿಗೆ ಲೋಕದ ಅರಿವೇ ಇರಲಿಲ್ಲ. ರೈಲು ಹತ್ತಿದ, ಇಳಿಸಿದಲ್ಲಿ ಇಳಿದ. ಯಾರೋ ಕರೆದು ಕೊಟ್ಟಿದ್ದನ್ನು ತಿಂದ. ಕೊಳದ ನೀರು ಕುಡಿದ. ಕಟ್ಟೆ ಗಳಲ್ಲಿ ಮಲಗಿದ. ಮರಳಿ ಮನೆಗೆ ಬರುವ ಧೈರ್ಯವೂ ಇಲ್ಲ. ತಂದೆತಾಯಿಗಳನ್ನು ಹಂಬಲಿಸಿ ಅತ್ತದ್ದೇ ಅತ್ತದ್ದು.

ಮುದುಕಿ;- ಪಾಪ, ತಂದೆತಾಯಿಗಳಿದ್ದೂ ತಬ್ಬಲಿಯಾಯ್ತು ಮಗು. ಊರಲ್ಲಿ ಈಗಿನಂತೆ ಸಾಲೆಯಾವರೂ ಇರುತ್ತಿದ್ದರೆ ಪ್ರಕಾಶನಂತೆ ಅವನೂ ಓದುತ್ತಿದ್ದ.

ಆದಿ;- ಒಂದು ತಿಂಗಳು ಅಲ್ಲಿ ಇಲ್ಲಿ ಸುತ್ತಿ ಮದ್ರಾಸ್ ಸೇರಿದನಂತೆ. ಅಲ್ಲಿ ಒಂದು ಮನೆಯಲ್ಲಿ ಕೆಲಸಕ್ಕೆ ಸೇರಿಸಿಕೊಂಡರಂತೆ. ಕೆಲಸ ವಿಪರೀತ, ತಿನಿಸು ಕಡಿಮೆ. ಸಂಬಳವಿಲ್ಲ. ಏಟು ಬೈಗಳು ಧಾ ರಾಳ. ಎರಡು ವರ್ಷ ಅಲ್ಲಿ ಇದ್ದನಂತೆ. ಕೊನೆಗೆ ಅಲ್ಲಿನ ಯಾತನೆ ಸಹಿಸದೆ ಮತ್ತೆ ರೈಲು ಹತ್ತಿದ. ಟಿಕೇಟಿಲ್ಲದೆ ಪ್ರಯಾಣ. ಗೊತ್ತು ಗುರಿ ಇಲ್ಲದ ಸಂಚಾರ. ಒಂದು ರಾತ್ರಿ ಭಯಂಕರವಾದ ಗಾಳಿ ಮಳೆ. ಆಗ ಮನೆಯ ಕಟ್ಟೆಯೊಂದರಲ್ಲಿ ಗಡಗುಟ್ಟುತ್ತಾ ಕುಂತಿದ್ದ

ನಂತೆ. ಅಲ್ಲಿಂದ ಓಡಿಸಿದಾಗ ದಾರಿಯುದ್ದಕ್ಕೂ ನೆನೆಯುತ್ತಾ ಎಚ್ಚರ ತಪ್ಪಿ ಬಿದ್ದನಂತೆ.

ಮುದುಕಿ;- ಅಯ್ಯಯ್ಯೋ ಮನೆಯಿದ್ದೂ ಬೀದಿಯಲ್ಲಿ ಬೀಳಬೇಕಾಯ್ತು.

ಪ್ರಭಾ;- ಮಾಡಿದ್ದುಣ್ಣೋ ಮಹಾರಾಯ.

ಮುದುಕಿ;- ಯಾರು ಮಾಡಿದ್ರೋ? ಯಾರು ಉಂಡಿದ್ರೋ? ಇಲ್ಲಿಯೂ ಒಂದು ಮಳೆಗೆ ನಮ್ಮ ಮನೆ ಮುರಿದು ಬಿದ್ದಿತ್ತು. ಪುಣ್ಯಕ್ಕೆ ಬೇರೆ ಯಾರೂ ಇರಲಿಲ್ಲ. ತಕ್ಷಣ ಆ ರಾತ್ರಿಯಲ್ಲಿ....

ಆದಿ;- ನಮ್ಮ ಮನೆಗೆ ಬಂದಿದ್ದಿರಿ. ಈ ದಿನ ಬೆಳಗ್ಗೆ ನನಗೆ ಆ ವಿಚಾರ ಥಟ್ಟನೆ ನೆನಪಾಗಿತ್ತು. ನಮ್ಮ ಮಾವನವರು ತಮ್ಮ ವಿಚಾರ ವನ್ನು ಹೇಳುತ್ತಿದ್ದರು. ಒಂದು ದಿನ ಗಾಳಿ ಮಳೆಗೆ ಅವರು ತುಂಬಾ ತೊಂದರೆಪಟ್ಟರಂತೆ. ಕಟ್ಟೆಯೊಡೆದು ನೀರು ನುಗ್ಗಿ ಅವರ ಮಗಳು ತೇಲಿಹೋದಳಂತೆ. ಆ ಗಾಳಿ ಮಳೆಯ ಸುದ್ದಿ ಬಂದಾಗ ಯಾಕೋ ತಕ್ಷಣ ನೀವು ಆ ದಿನ ಬಂದುಹೋದ ಘಟನೆ ನೆನಪಾಯ್ತು. ಬೇಡವೆಂದರೂ ನೀವು ಆ ಮಳೆಯಲ್ಲೇ ಹಿಂತಿರುಗಿ ಹೋದಿರಿ.

ಮುದುಕಿ;- ಹೌದು ಮುರಿದು ಬಿದ್ದರೂ ಮನೆ ನನ್ನದು. ಅದರ ರಕ್ಷಣೆ ಮಾಡದಿದ್ದರೆ ಹೇಗೆ? ಕೊನೆಗೆ ನೀವೆಲ್ಲಾ ಬಂದಿರಿ. ಊರ ಮಂದಿಯ ನೆರವಿನಿಂದ ಮುರಿದ ಮನೆ ಮತ್ತೆ ನೆಲಸಿತು. ಈವೊತ್ತು ಈ ಮನೆಗಾಗಿ ಈ ಮಕ್ಕಳು ಜಗಳಾಡುತ್ತಿದ್ದಾರೆ. ನಿಜ ಕೇಳಿದರೆ ನಾನೂ ಅವರೂ ಮನೆಯಿಲ್ಲದೇ ಬೀದಿಯಲ್ಲಿ ನಿಂತಾಗ ಅನೇಕರು ಉದಾರವಾಗಿ ನೆರವಾದ್ದಕ್ಕೆ ಈ ಮನೆ ಮತ್ತೆ ನಿಂತಿತು. ಇದು ನಮ್ಮ ಮನೆ ಅಲ್ಲ, ಎಲ್ಲರ ಮನೆ. ಪ್ರಕಾಶ್ ಹೇಳ್ತಾನೆ ಈ ಮನೆ ಯನ್ನು ಮುರಿದು ಹೊಸ ಅರಮನೆ ಕಟ್ಟಿಸೋಣಾಂತ. ಹತ್ತು ಮಂದಿಯ ಉಪಕಾರ ಹೊತ್ತು ಈ ರೂಪಗೊಂಡ ಈ ಮನೆ ಹೀಗೆಯೇ ಇರುವುದೇ ಒಂದು ಬಗೆಯ ಅಭಿಮಾನ.

ವಿಶ್ವ;- ಕತ್ತಲಾಗುತ್ತಾ ಬಂತು. ಚಂದ್ರು ವಿಚಾರ ಮುಂದುವರಿಯಲಿ.

ಆದಿ;- ಯಾರೋ ಪುಣ್ಯಾತ್ಮರು ಆತನನ್ನು ತಮ್ಮ ಮನೆಗೆ ಕರೆದು ಕೊಂಡು ಹೋಗಿ ಉಪಚರಿಸಿದರಂತೆ.

ಸನಾ;- ಊರಲ್ಲಿ ದೊರೆಯದ ಮಮತೆ ಪರವೂರಲ್ಲಿ ದೊರೆಯಿತು. ಆ ಮೇಲೆ?

ಮುದುಕಿ;- ಯಾರು ಆ ಪುಣ್ಯಾತ್ಮರು?

ಆದಿ;- ಅವನು ಮಾರವಾಡ ಕಡೆಯ ಒಬ್ಬ 'ಹಜಾಮ'. ಉದ್ಯೋಗ ಕ್ಕಾಗಿ ಲಾಹೋರಿನಲ್ಲಿ ನೆಲಸಿದ್ದ.

ವಿಶ್ವ;- ಕ್ಷೌರಮಾಡುವವನೂ ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂ ತ್ಯಕ್ಕೆ ಹೋಗಬೇಕೆ?

ಸನಾ;- ಊರಲ್ಲಿ ಕೂಳಿಲ್ಲದ ಮೇಲೆ ಅರಸುತ್ತಾ ಹೋಗಬೇಕಲ್ಲ? ಈಗ ನಮ್ಮಲ್ಲಿ ಮುಕ್ಕಾಲು ಪಾಲು ಕ್ಷೌರದ ಮನೆಗಳು ಗುಜರಾತಿಗಳವು.

ಆದಿ;- ಅಲ್ಲಿ ಕೂಳಿಲ್ಲದೆ ಇಲ್ಲಿ ಬಂದರು ಎನ್ನುವುದು ಸಣ್ಣ ಮಾತು.

ಸನಾ;- ವಿಶಾಲ ಹೃದಯದಿಂದ ದೇಶ ಸುತ್ತಿದರು ಎಂದರೆ ದೊಡ್ಡ ಮಾ ತಾಯಿತು. ಆ ಬಡ ಕ್ಷೌರಿಕನಲ್ಲೂ ದಯೆ ಇದೆ ಎಂದ ಹಾಗಾ ಯಿತು.

ಆದಿ;- ಯಾಕೆ ಆತನು ಮನುಷ್ಯನಲ್ಲವೇ? ಆತನ ಆಶ್ರಯದಲ್ಲಿ ಚಂದ್ರು ವಿಗೆ ಒಂದು ಜಾಡು ಸಿಗುವ ಹಾಗಿತ್ತು. ಐದಾರು ತಿಂಗಳಲ್ಲಿ ಈ ಋಣವೂ ತೀರಿತು. ದೇಶಕ್ಕೆ ಸ್ವಾತಂತ್ರ್ಯ ಬಂತು. ಹಿಂದುಸ್ಥಾನ, ಪಾಕಿಸ್ಥಾನಗಳ ವಿಭಾಗವಾಯಿತು. ಲಾಹೋರಿನಲ್ಲಿ ಹಿಂದುಗಳು ಇರುವುದೇ ಕಷ್ಟವಾಯಿತು. ಚಂದ್ರುವಿನ ಆಶ್ರಯದಾತ ಸಂಸಾರ ಸಮೇತ ಆತತಾಯಿಗಳ ಆಗ್ರಹಕ್ಕೆ ಆಹುತಿಯಾದ.

ಮುದುಕಿ;- ನಮ್ಮ ಹುಡುಗ?

ಆದಿ;- ಹೇಗೋ ತಪ್ಪಿಸಿಕೊಂಡ! ನಿರ್ವಾಸಿತರ ತಂಡದೊಂದಿಗೆ ದೆಹಲಿಗೆ ಬಂದ. ಆದರೆ ಆಗಾಗ ಉಂಟಾಗುತ್ತಿದ್ದ ಜಾತೀಯ ಗಲಭೆಗಳು

ಆವನ ಮನಸ್ಸನ್ನು ಕದಡುತ್ತಿದ್ದವು. ನೊಂದವರ ನೆರವಿಗೆ ಧಾವಿಸ ತೊಡಗಿದ. ಉಪಕೃತರ ಉಪಚಾರ, ಸೇವಾಭಾವದ ಸಂಚಾರವೇ ಆತನ ನಿತ್ಯಕ್ರಮವಾಯಿತು. ಹಿಂದುಗಳು ಮುಸಲ್ಮಾನರನ್ನೂ ಮುಸಲ್ಮಾನರು ಹಿಂದುಗಳನ್ನೂ ಸಮಯ ಸಾಧಿಸಿ ಹಿಂಸಿಸುತ್ತಿದ್ದರು. ಈ ಹೆಸರಿನಲ್ಲಿ ದರೋಡೆಕಾರರು ಕೊಲೆ, ಸುಲಿಗೆ, ಅತ್ಯಾಚಾರಗಳನ್ನು ನಡೆಸಿದರು. ಇವರ ಹಾವಳಿಯನ್ನು ತಡೆಗಟ್ಟುವ ಉದ್ದೇಶದಿಂದ ಚಂದ್ರು ಊರೂರು ಸಂಚರಿಸಿದ. ನೊಂದವರು ಹಿಂದುಗಳಿರಲಿ, ಮುಸಲ್ಮಾನರಿರಲಿ ಎಲ್ಲರಿಗೂ ನೆರವಾದ. ಒಂದು ರಾತ್ರಿ ಮುಸಲ್ಮಾನೀ ಕುಟುಂಬದ ಮೇಲೆ ಯಾರೋ ದುರ್ಜನರು ಧಾಳಿಮಾಡಿ ಮನೆಗೆ ಬೆಂಕಿಯಿಟ್ಟು ಅಲ್ಲಿದ್ದ ಹದಿನೆಂಟು ವರ್ಷದ ಯುವತಿಯೊಬ್ಬಳನ್ನು ಬಲಾತ್ಕಾರವಾಗಿ ಎಳೆದುಕೊಂಡು ಹೋದರು........ ಆಗ........

(ಒಮ್ಮೆಲೆ ಕತ್ತಲು–ಕಾಡು–ರಸ್ತೆ ಪರದೆ)

— ತೆರೆ —

## ನೋಟ ೮

[ಪೂರ್ವ ಸ್ಮರಣ (Flash Back) ಸೂಚನೆಗೆ ರಂಗದಲ್ಲಿ ಮಂದ ಪ್ರಕಾಶ ಕರಿ ಮುಸುಕಿನ ವ್ಯಕ್ತಿಯೊಂದು ಮಮತಾಳನ್ನು ಎಳೆಯುತ್ತಾ ಬರುವನು.]

ಮಮತಾ;– ಅಯ್ಯಯ್ಯೋ! ರಕ್ಷಿಸಿರಿ! ಯಾರಾದರೂ ರಕ್ಷಿಸಿರಿ....

ವ್ಯಕ್ತಿ;– ಮುಚ್ಚು ಬಾಯಿ, ಕೂಗಿದರೆ ಕೊಂದುಬಿಟ್ಟೇನು.

ಮಮತಾ;– ದಯವಿಟ್ಟು ನನ್ನನ್ನು ಬಿಡು. ನಿನ್ನ ಕಾಲಿಗೆ ಬೀಳುತ್ತೇನೆ.

ವ್ಯಕ್ತಿ:– ಬಿಡುವುದಕ್ಕಾಗಿ ನಿನ್ನನ್ನು ಎಳೆದು ತರಲಿಲ್ಲ. ಸುಮ್ಮನೆ ನನ್ನ ಜೊತೆ ಬಂದರೆ ಸರಿ. ನಿನಗೆ ಏನೂ ಆಗುವುದಿಲ್ಲ. ಕೂಗಿಕೊಂಡೆಯೋ ಹುಶಾರ್.

ಮಮತಾ;- ನನ್ನನ್ನು ಎಲ್ಲಿಗೆ ಕರೆದೊಯ್ಯುತ್ತೀ? ಯಾರು ನೀನು?

ವ್ಯಕ್ತಿ;- ನಾನು ಯಾರಾದರೆ ನಿನಗೇನು? ನನ್ನ ಜೊತೆ ಬಂದರೆ ಸರಿ. ನೀನು ತುಂಬಾ ಚಂದ ಇದ್ದಿ. ಅದಕ್ಕಾಗಿಯೇ ಇಷ್ಟೊಂದು ಕಷ್ಟ ಪಟ್ಟಿದ್ದೇನೆ. ನಿನ್ನಂಥಾ ಹೆಣ್ಣಿಗೆ ಅರಬಸ್ಥಾನದಲ್ಲಿ ಒಳ್ಳೆಯ ಬೇಡಿಕೆ ಇದೆ. ಅದಕ್ಕೆ ಬೇಕಾದ ಸಿದ್ಧತೆ ಅನುಭವಗಳನ್ನು ನಾನು ಕೊಡುತ್ತೇನೆ.

ಮಮತಾ:- ಬೇಕಾದರೆ ನನ್ನನ್ನು ಮದುವೆಯಾಗು. ಆದರೆ ಮಾರಬೇಡ.

ವ್ಯಕ್ತಿ;- ಮದುವೆ? ಹ್ಹ ಹ್ಹ ಹ್ಹ! ಮದುವೆ? ಮದುವೆ ಮಾಡಿಕೊಂಡರೆ ನನಗೇನು ಲಾಭ? ನಿನ್ನನ್ನು ಸಾಕೋ ಕಷ್ಟ ಬೇರೆ! ರುಚಿ ನೋಡಿ ಸಾಗಹಾಕುತ್ತೇನೆ.

ಮಮತಾ;- ಆಗಲಿ ಕೈಬಿಡು, ನಾನೇ ನಿನ್ನ ಜೊತೆ ಬರುತ್ತೇನೆ.

ವ್ಯಕ್ತಿ;- ಹಾಗೇನು? ನೀನು ಒಳ್ಳೇ ಹುಡುಗಿ. ಇದು ಮೊದಲೇ ಗೊತ್ತಿರುತ್ತಿದ್ದರೆ ನಿನ್ನ ತಂದೆತಾಯಿಗಳನ್ನು ಬಂಧಿಸಿ ಮನೆಗೆ ಬೆಂಕಿ ಹಚ್ಚುತ್ತಿರಲಿಲ್ಲ.

ಮಮತಾ;- ಅನ್ಯಾಯವಾಗಿ ಅವರ ಕೊಲೆ ಮಾಡಿದಿ ನೀನು.

ವ್ಯಕ್ತಿ:- ನಿನಗಾಗಿ ಅಷ್ಟು ಮಾಡಬೇಕಾಯಿತು. ಓಡಿಹೋಗಬೇಡ ಮತ್ತೆ? (ಕೈ ಬಿಡುವನು)

ಮಮತಾ;- ನಿನ್ನ ಹೆಸರೇನು? ಮನೆಯೆಲ್ಲಿ?

ವ್ಯಕ್ತಿ;- ಅದೊಂದೂ ಕೇಳಬೇಡ. (ಮಮತಾ ಓಡಿಹೋಗುವಳು) ಆರೆ! ಓಡಿಹೋಗುತ್ತಿಯೇನು? (ಓಡಿಹೋಗಿ ಹಿಡಿದು ಹೊಡೆಯುತ್ತಾ ಬರುವನು)

ಮಮತಾ;- ಅಯ್ಯಯ್ಯೋ!

ವ್ಯಕ್ತಿ;- ಓಡಿಹೋದದ್ದಲ್ಲದೇ ಈಗ ಕೂಗುತ್ತೀಯೇನು? (ಚೂರಿ ತೆಗೆಯುವನು. ಚಂದ್ರು ಧಾವಿಸಿ ಬಂದು ಚೂರಿಯನ್ನು ಕಸಿದುಕೊಳ್ಳುವನು. ಇಬ್ಬರೂ ಗುದ್ದಾಡುವರು. ಮಮತಾ ಓಡಿಹೋಗುವಳು. ಮತ್ತೆ ವ್ಯಕ್ತಿ ಹಿಂಬಾಲಿಸಿ ಎಳೆದು ತರುವನು.)

ಚಂದ್ರು;- (ಬಿಡಿಸುತ್ತಾ) ನೀನು ಇಲ್ಲೇ ನಿಂತಿರು. ಇವನಿಗೆ ಚೆನ್ನಾಗಿ ಬುದ್ಧಿ ಕಲಿಸುತ್ತೇನೆ. ನನ್ನಿಂದ ನಿನಗೆ ಭಯವಿಲ್ಲ. (ವ್ಯಕ್ತಿಯನ್ನು ಚೆನ್ನಾಗಿ ಥಳಿಸುವನು)

ವ್ಯಕ್ತಿ,- ಹುಂ ಇನ್ನೊಮ್ಮೆ ಸಿಗುವುದಿಲ್ಲವೇ? (ಓಡಿಹೋಗುವನು)

ಚಂದ್ರು;- ತಪ್ಪಿಸಿಕೊಂಡ ಕಳ್ಳ! ಚೆನ್ನಾಗಿ ಹಿಡಿಯುತ್ತಿದ್ದೆ. ನೀನು ಒಬ್ಬಳೇ ಇರುವುದು ಅಪಾಯಕರ. ಯಾರು ನೀನು?

ಮುಮ್ತಾ:- ನಾನು.... ನಾನು....

ಚಂದ್ರು;- ಹುಂ, ಹೇಳು. ಹೆದರಬೇಡ. ನಿನ್ನ ಹೆಸರೇನು?

ಮುಮ್ತಾ:- ಮುಮ್ತಾಜ್. ಇಲ್ಲೇ ಸ್ವಲ್ಪ ದೂರದಲ್ಲೇ ಸೈಯದ್ ಹುಸೇನ್ ಖಾನ್ ಎಂತ ಇದ್ದಾರೆ. ನಾನು ಅವರ ಮಗಳು. ಆ ಪೋಲಿ ನಮ್ಮ ಮನೆಗೆ ನುಗ್ಗಿ ಅಪ್ಪ ಅಮ್ಮನನ್ನು ಹೊಡೆದು ಕಂಭಕ್ಕೆ ಬಿಗಿದು, ಮನೆಗೆ ಬೆಂಕಿ ಹಚ್ಚಿ ನನ್ನನ್ನು ಎಳೆದುಕೊಂಡು ಬಂದು....

ಚಂದ್ರು;- ಛೆ! ಛೆ! ಎಲ್ಲಿದೆ ನಿಮ್ಮ ಮನೆ? ಬೇಗ ಹೋಗೋಣ. (ಹೋಗುವರು)

— ತೆರೆ —

## ನೋಟ ೯

[ಒಂದು ಸಮಾಧಿಯ ಮುಂದೆ ಮುಮ್ತಾ ಕುಳಿತು ಅಳುತ್ತಿದ್ದಾಳೆ. ರಂಗದಲ್ಲಿ ಮಂದ ಪ್ರಕಾಶವೇ ಮುಂದುವರಿದಿದೆ.]

ಚಂದ್ರು;- ಮುಮ್ತಾಜ್, ಒಬ್ಬಳೇ ಈ ಕಡೆ ಯಾಕೆ ಬಂದೆ?

ಮುಮ್ತಾ-- ತಂದೆ ತಾಯಿಯ ನೆನಪಾಯಿತು. ಸಮಾಧಿಯನ್ನಾದರೂ....

ಚಂದ್ರು;- ಈ ನಿರ್ಜನ ಪ್ರದೇಶದಲ್ಲಿ ದುರ್ಜನರ ಭಯ ಹೆಚ್ಚು.

ಮುಮ್ತಾ;- ತಂದೆ ತಾಯಿಗಳು ಇಲ್ಲಿ ಆಹುತಿಯಾದರು. ನಾನೂ ಸತ್ತಿದ್ದರೆ ಚೆನ್ನಾಗಿತ್ತು. ಆದರೆ ಮನೆಯನ್ನು ಸುಟ್ಟ ಆ ದುಷ್ಟ ನನ್ನನ್ನು ಮಾತ್ರ....

ಚಂದ್ರು;- ಹೌದು, ಅವನಿಗೆ ಲಾಭ ನಿನ್ನಿಂದ. ಅರಬದ ದಾರುಕಟ್ಟೆ ಯಲ್ಲಿ ಮಾರಬೇಕೆಂದಿದ್ದ. ಹೆಣ್ಣಿನ ಹೊಟ್ಟೆಯಲ್ಲಿ ಹುಟ್ಟಿದವನು ಹೆಣ್ಣನ್ನು ಮಾರಿ ಹಣ ಮಾಡಲು ಹೊರಟಿದ್ದಾನೆ. ನಿನ್ನ ರಕ್ಷಣೆ ಗಾಗಿ ಆ ದಿನ ಆತನನ್ನು ಬಿಟ್ಟೆ. ಎಷ್ಟು ಮಂದಿಗೆ ಆತ ಹಿಂಸೆ ಕೊಟ್ಟಿದ್ದಾನೋ? ಎಂಥಾ ದೇಶದಲ್ಲಿ ಎಂಥಾ ಜನರು? ಧಿಕ್ಕಾರ ಇಂತಹ ಜನಾಂಗಕ್ಕೆ.

ಮಮತಾ;- ಕೆಲವರು ಕೆಟ್ಟವರಾದರೆ ಜನಾಂಗಕ್ಕೆ ಯಾಕೆ ಧಿಕ್ಕಾರ?

ಚಂದ್ರು;- ಇಂಥ ದಾರಿ ತಪ್ಪಿದವರನ್ನು ಸರಿದಾರಿಗೆ ತರಬೇಕಾಗಿತ್ತು. ಸರಕಾರ ಇಂಥಾ ಅಪರಾಧಿಗಳನ್ನು ಪತ್ತೆಮಾಡಿ ಕಠಿಣ ಶಿಕ್ಷೆಗೆ ಗುರಿಮಾಡಬೇಕು. ಈ ಕಾಲದಲ್ಲಿಯೂ ಇಂತಹ ಅನಾಗರಿಕ ವ್ಯವಹಾರ ನಡೆಯುತ್ತಿರುವುದು ಶೋಚನೀಯ. ನಡೆ ಹೋಗೋಣ.

ಮಮತಾ;- ನನ್ನಿಂದ ನಿಮಗೆ ತೊಂದರೆ. ನಿಮಗೇ ಇರುವುದಕ್ಕೆ ಜಾಗ ಇಲ್ಲ. ಆ ಸಣ್ಣ ಕೊಠಡಿಯಲ್ಲಿ ನಾನೂ ಇರುವುದನ್ನು ಕಂಡು ಅಕ್ಕಪಕ್ಕದ ಮಂದಿ ಏನೆಲ್ಲಾ ಅನ್ನುತ್ತಾರೆ.

ಚಂದ್ರು;- ಮನುಷ್ಯತ್ವ ಇಲ್ಲದ ಸ್ವಭಾವ ಅದು. ನಿನ್ನ ತಂದೆ ತಾಯಿ ಗಳು ಬದುಕಿರುತ್ತಿದ್ದರೆ ಯಾವ ತೊಂದರೆಯೂ ಇರುತ್ತಿರಲಿಲ್ಲ. ನಾವು ಬರುವುದರೊಳಗೆ ಈ ಮನೆ ಬೂದಿಯಾಗಿತ್ತು. ನಿನ್ನ ತಾಯಿ ತಂದೆಗಳ ದೇಹವೂ ಬೂದಿಯಾಗಿತ್ತು. ಅವರು ಊರಿ ನಿಂದ ದೂರದಲ್ಲಿ ಒಂಟಿಯಾಗಿ ಮನೆ ಮಾಡಬಾರದಿತ್ತು.

ಮಮತಾ;- ಆಗಿಹೋದುದಕ್ಕೆ ಇನ್ನು ಮರುಗಿ ಫಲವೇನು? ಆಪತ್ತಿ ನಲ್ಲಿ ಅತಿ ಸ್ಥೈರ್ಯವಿರಬೇಕು. ನಿನಗೆ ಬೇರೆ ಯಾರಾದರೂ ಬಂಧುಗಳಿರುವರೇ?

ಮಮತಾ:- ಬಂಧುಗಳು? ನಿಮಗಿಂತ ಹೆಚ್ಚಿನ ಬಂಧುಗಳು ಯಾರು?

ಚಂದ್ರು;- ಆದರೂ ನಾನು ಗಂಡು, ನೀನು ಹೆಣ್ಣು.

ಮಮತಾ;- ಮನುಷ್ಯರು ತಾನೆ?

ಚಂದ್ರು;– ಆಕಾರದಲ್ಲಿ ಮನುಷ್ಯನಾದರೂ ಬುದ್ಧಿಯಲ್ಲಿ ಪ್ರಾಣಿಗಿಂತ ಕೀಳು. ನನ್ನದೂ ಉಪ್ಪು ಮೆಣಸು ತಿಂದ ದೇಹ. ಯಾವಾಗ ಏನು ಅಚಾತುರ್ಯ....

ಮಮತಾ;– ಯಾರಿಂದ? ನಿಮ್ಮಿಂದಲೇ. ಈಗೊಂದು ತಿಂಗಳಿಂದ ತಂಗಿಯಂತೆ ನಡೆದುಕೊಂಡಿದ್ದೀರಿ. ನನ್ನ ಹೊಟ್ಟೆ ಹೊರೆಯಲು ನೀವು ಪಟ್ಟ ಕಷ್ಟ ನನಗೆ ತಿಳಿದಿದೆ. ನಿಮ್ಮಂಥವರು ತಪ್ಪುಮಾಡಿದರೂ ಅದು ತಪ್ಪಲ್ಲ.

ಚಂದ್ರು;– ಹಾಗಾದರೆ ಇಬ್ಬರ ಹಿತದೃಷ್ಟಿಯಿಂದ ಒಂದು ಒಪ್ಪಂದಕ್ಕೆ ಬರೋಣ. ನಾವು ಮದುವೆ....

ಮಮತಾ;– ನಾನು ಮುಸಲ್ಮಾನರವಳು.

ಚಂದ್ರು;– ಅಂದರೆ ಮನುಷ್ಯಳು ತಾನೆ? ಎಲ್ಲಕ್ಕೂ ಹೆಚ್ಚಾಗಿ ನಾವು ಒಂದೇ ದೇಶದವರು. ನಾನು ತಂದೆತಾಯಿಗಳನ್ನು ಬಿಟ್ಟು ಬಂದವನು. ನಿನ್ನ ತಂದೆತಾಯಿಗಳು....

ಮಮತಾ.– ಇವರು ನನ್ನ ತಂದೆತಾಯಿಗಳಲ್ಲ. ನಾನು ಐದು ವರ್ಷದವಳಿದ್ದಾಗ ಅಂದರೆ ಈಗ ಹದಿನಾರು ವರ್ಷಗಳ ಹಿಂದೆ ನೀರಿನಲ್ಲಿ ತೇಲಿಕೊಂಡು ಬಂದೆನಂತೆ. ಆಯುಷ್ಯವಿದ್ದುದಕ್ಕೆ ಅಷ್ಟು ನೀರು ಕುಡಿದರೂ ಪ್ರಾಣ ಹೋಗಿರಲಿಲ್ಲ. ಅಕಸ್ಮಾತ್ ಈತ ನನ್ನನ್ನು ಕಂಡು ಎತ್ತಿಕೊಂಡು ಮನೆಗೆ ಹೋಗಿ ಉಪಚರಿಸಿದ. ನಾಲ್ಕಾರು ಗಂಟೆಗಳ ಬಳಿಕ ಎಚ್ಚರವಾಯಿತಂತೆ. ಆದರೆ ಜ್ವರ ವಿಪರೀತ. ನಾಲ್ಕಾರು ತಿಂಗಳ ಬಳಿಕ ಆರೋಗ್ಯ ಹೊಂದಿದರೆ ನನಗೆ ಹಿಂದಿನದೊಂದೂ ನೆನಪಾಗಲೊಲ್ಲದು. ಅವರನ್ನೇ ನನ್ನ ತಾಯಿತಂದೆಗಳೆಂದು ಭಾವಿಸಿದ್ದೆ. ಒಂದು ದಿನ ಅವರಾಗಿ ಹೇಳಿದಾಗ ಈ ವಿಚಾರ ತಿಳಿಯಿತು. ಯಾರ ಮಗುವೆಂದು ತಿಳಿಯದೆ ಅವರೇ ಇಟ್ಟುಕೊಂಡರಂತೆ. ಅವರಿಗೆ ಮಕ್ಕಳಿಲ್ಲದ ಕೊರತೆ ನನ್ನಿಂದ ಪರಿಹಾರವಾಯಿತು. ಆದರೆ ನನ್ನ ದೆಸೆಯಿಂದ ಅವರಿಗೆ ಜೀವಂತ ಸುಟ್ಟು ಸಾಯುವ ದುರಂತ ಸಂಭವಿಸಿತು.

ಚಂದ್ರು;– ಮುಮ್ತಾಜ್!

ಮಮತಾ;– ಆ ಹೆಸರನ್ನು ಇವರೇ ಇಟ್ಟಿದ್ದು. ನನ್ನ ಹೆಸರು ಮಮತಾ.

ಚಂದ್ರು;– ಹಾಗಿದ್ದರೆ ನೀನು ಹುಟ್ಟಿನಿಂದ ಹಿಂದು. ಮುಸಲ್ಮಾನರಲ್ಲಿ ಬೆಳೆದವಳು ಅಷ್ಟೆ. ಈ ವಿಚಾರ ತಿಳಿದದ್ದು ಒಳ್ಳೆಯದಾಯಿತು.

ಮಮತಾ;– ಯಾಕೆ? ನಿಮಗೂ ಮತಭೇದದ ಅಂಜಿಕೆಯೇ?

ಚಂದ್ರು;– ಹಾಗಲ್ಲ, ಸಂಪ್ರದಾಯದ ವಿಷ ಎಲ್ಲಾ ಜಾತಿಯವರಲ್ಲೂ ಇದೆ. ನಾಳೆ ನಮ್ಮೂರಿಗೆ ಹೋದರೆ ಅಲ್ಲೂ ಬಂದೀತು.

ಮಮತಾ;– ನಿಮ್ಮೂರು? ಅದು ಯಾವುದು?

ಚಂದ್ರು;– ನನಗೂ ಅದು ಮರೆಯುವಷ್ಟು ದೂರವಾಗಿದೆ. ಕರ್ನಾಟಕದ ಒಂದು ಸಣ್ಣ ಊರು. ಊರು ಬಿಟ್ಟು ಸುಮಾರು ಹತ್ತೊಂಬತ್ತು ವರ್ಷಗಳಾದುವು. ಈಗ ನಿನ್ನನ್ನು ಪಡೆದ ಮೇಲೆ ಊರಿಗೆ ಮರಳುವ ಯೋಚನೆಯಾಗುತ್ತಿದೆ. ಇಲ್ಲಿ ನನ್ನ ಜೀವನ ಅನಿಶ್ಚಿತ. ಸಂಸಾರಿಯಾದ ಮೇಲೆ ಹಾಗಿರಲು ಬರುವುದಿಲ್ಲ. ಅಲ್ಲದೇ ತಂದೆ ತಾಯಿ, ಹುಟ್ಟೂರುಗಳ ನೆನಪಾಗುತ್ತದೆ.

ಮಮತಾ;– ನಾನು ಹುಟ್ಟಿದ್ದೂ ಆ ಕಡೆಯೇ. ಎಲ್ಲಿ, ಏನು ಅಂತ ಹೇಳುವುದಕ್ಕೆ ಗೊತ್ತಾಗುವುದಿಲ್ಲ. ನಿಮ್ಮ ಜೊತೆಯಲ್ಲಿ ಯಾವ ಊರಿಗಾದರೂ ಬರಲು ಸಿದ್ಧಳಿದ್ದೇನೆ.

ಚಂದ್ರು;– ಆದರೆ ಆ ಊರ ಭಾಷೆಯೇ ಬೇರೆ.

ಮಮತಾ;– ನಿಮಗೆ ಅದು ಬರುತ್ತದೆಯೇ?

ಚಂದ್ರು;– ಒಂದೊಂದು ಶಬ್ದ ನೆನಪಾಗುತ್ತಿದೆ. ಅಲ್ಲಿಗೆ ಹೋಗಿ ನಾಲ್ಕು ದಿನ ಬಳಕೆಯಾದರೆ ಆ ಭಾಷೆಯೂ ಬಂದೀತು. ಈಗ ಈ ಕಡೆಯ ಭಾಷೆ ಬರಲಿಲ್ಲವೇ? ಭಾಷೆ ಬೇರಾದರೂ ಭಾವ ಒಂದೇ. ಮನಸ್ಸಿದ್ದರೆ ಯಾವ ಭಾಷೆಯೂ ಕಷ್ಟವಲ್ಲ, ಯಾವ ಪ್ರಾಂತ್ಯವೂ ಪರಕೀಯವಲ್ಲ.

[ಪೂರ್ವ ಸ್ಮರಣೆ ಮುಗಿದುದಕ್ಕಾಗಿ ರಂಗದಲ್ಲಿ ಮೊದಲಿನಂತೆ ಬೆಳಕು ಬೀಳುತ್ತಿದ್ದಂತೆ ಪರದೆ]

— ತೆರೆ —

# ನೋಟ ೧೦

(ರಸ್ತೆಯಲ್ಲಿ ಆದಿಮೂರ್ತಿ ಮತ್ತು ದೇವದಾಸ್ ಎದುರು ಬದುರಾಗಿ ಬರುತ್ತಿದ್ದಾರೆ.)

ಆದಿಮೂರ್ತಿ;- ಓ ಮಾವನವರೇನು? ಯಾವ ಕಡೆ ಹೊರಟಿರಿ?

ದೇವದಾಸ್:- ನಿನ್ನನ್ನು ಹುಡುಕುತ್ತಾ ಹೊರಟೆ. ಪಂಚಾಯಿತಿಗೆ ಹೋದವನು ರಾತ್ರಿಯಾದರೂ ಕಾಣುವುದಿಲ್ಲವಲ್ಲ, ನೋಡಿ ಬರುವ ಎಂದು ತಿರುಗಾಡುತ್ತಾ ಹೊರಟೆ. ಏನು ಇಷ್ಟು ತಡ? ಮುಗಿಯಿತೇನು ನಿನ್ನ ಪಂಚಾಯತಿ?

ಆದಿ:- ಹೂಂ, ಮುಗಿಸಿದೆವು ಹೇಗಾದರೂ ಎಲ್ಲರೂ ಸೇರಿದ್ದರು. ಬಹಳ ಹೊತ್ತಿನ ವರೆಗೆ ಚಂದ್ರುವೇ ನಾಪತ್ತೆ. ಪ್ರಕಾಶನೂ ಎಲ್ಲಿಗೋ ಹೋಗಿಬಿಟ್ಟ. ಚಂದ್ರುವಿನ ಪೂರ್ವ ವೃತ್ತಾಂತ ಪ್ರಸ್ತಾಪಿಸಿ ಮುಗಿಸುವ ಹೊತ್ತಿಗೆ ಹೊತ್ತು ಕತ್ತಲಾಗಿತ್ತು. ಅಷ್ಟರಲ್ಲಿ ಚಂದ್ರುವೂ ಬಂದ, ಪ್ರಕಾಶನೂ ಬಂದ.

ದೇವ;- ಏನೆಂದು ತೀರ್ಮಾನ ಆಯ್ತು?

ಆದಿ;- ಅಣ್ಣತಮ್ಮಂದಿರಿಗೆ ಜಗಳ ಆದರೆ ವಿಭಾಗವೇ ಪರಿಹಾರ. ಪ್ರಾಚೀನ ಕಾಲದಿಂದಲೂ ಅಖಂಡವಾಗಿದ್ದ ನಮ್ಮ ದೇಶವೇ ಇಬ್ಭಾಗವಾಯಿತು. ಸಣ್ಣ ಮನೆಯಲ್ಲಂತೂ ಸಣ್ಣ ಹುಳುಕೇ ಹೆಚ್ಚು. ಹುಂ ಮನೆಗೆ ಹೋಗೋಣ. ಮಾತಾಡುತ್ತಾ ಹೋಗಬಹುದು. ಅವರ ವಿಚಾರಗಳನ್ನೆಲ್ಲಾ ಪೂರ್ತಿ ಹೇಳಬೇಕಾದರೆ ಒಂದೆರಡು ದಿನವೇ ಬೇಕು. ಹಚ್ಚಿಕೊಂಡದ್ದನ್ನು ತೊಳೆದುಕೊಳ್ಳುವುದಕ್ಕೆ ಒಂದೂವರೆ ದಿನವೇ ಹಿಡಿಯಿತು. ಆದರೂ ರಗಳೆ ಮುಗಿಯಿತು ಎನ್ನುವುದಕ್ಕೆ ಸಾಧ್ಯವಿಲ್ಲ. ಹೃದಯ ಶುದ್ಧವಾಗದೆ ಯಾವ ಕಶ್ಮಲವೂ ಹೋಗಲಾರದು.

ದೇವಃ- ಹಿಶಿಯಾದ ಮೇಲೆ ಅನ್ಯೋನ್ಯವಾಗಿರುವ ಅಣ್ಣತಮ್ಮಂದಿರೂ ಎಷ್ಟೋ ಜನ ಇದ್ದಾರೆ.

ಆದಿ;- ಈ ಅಣ್ಣತಮ್ಮಂದಿರಲ್ಲಿ ಅಂಥ ಒಡನಾಟ ಮೊದಲಿಂದಲೂ ಇರಲಿಲ್ಲ. ನಾಲ್ಕು ಜನದ್ದು ನಾಲ್ಕು ದಿಕ್ಕು. ಸದ್ಯಕ್ಕೆ ಮನೆಯಲ್ಲಿ ಒಂದು ಭಾಗವನ್ನು ಚಂದ್ರುವಿಗೆ ವಸತಿಗೆ ಬಿಟ್ಟು ಕೊಡಲಾಯಿತು. ವಯಸ್ಸಿಗೆ ಬರುವ ತನಕ ಉದಯ ಅಂದರೆ ಕಿರಿಯ ಹುಡುಗ ಹಿರಿಯವನಾದ ಪ್ರಭಾಕರನ ಅಧೀನ. ಮೂರನೆಯವನಾದ ಪ್ರಕಾಶನಿಗೆ ಬೇರೆ ಉದ್ಯೋಗವಿದೆ. ಅವನ ಅಂಶವೂ ಹಿರಿಯವನ ಅಧೀನದಲ್ಲಿ ನ್ಯಾಸದ ಹಾಗೆ ಅಂದರೆ ಗುತ್ತಿಗೆ ರೂಪದಲ್ಲಿರುತ್ತದೆ.

ದೇವ;- ಅಂತೂ ಆ ಮನೆಯೂ ಹಿಂದುಸ್ಥಾನ, ಪಾಕಿಸ್ಥಾನ ಆಯಿತು.

ಆದಿ;- ಬೇರೆ ದಾರಿ ಇರಲಿಲ್ಲ. ಹಾಗೆ ಆಗಲೇ ಬೇಕಾಯಿತು. ಮುಂದೆಯೂ ಅಕ್ರಮ ಆಗದಿದ್ದರೆ ಚೆನ್ನಾಗಿತ್ತು. ಆದರೆ ತೊಂದರೆಯಾಗಿರೋದು ಆ ತಾಯಿಗೆ. ಆಕೆಗೆ ಎಲ್ಲಾ ಮಕ್ಕಳೂ ಒಂದೇ. ಯಾವ ಮಗನನ್ನೂ ಬಿಟ್ಟಿರಲಾರಳು. ಆದ್ದರಿಂದ ಅವಳು ಇಷ್ಟಬಂದ ಹಾಗೆ ಯಾವ ಮಗನ ಬಳಿಯಲ್ಲಾದರೂ ಇರಬಹುದು.

ದೇವ;- ಮಕ್ಕಳೇ ಆ ಹೊಣೆಯನ್ನು ಹೊರದಿದ್ದರೆ?

ಆದಿ:- ತಾಯಿ ಯಾರಿಗಾದರೂ ಬೇಡವಾದಾಳೇ?

ದೇವ;- ಹಣದ ಮುಂದೆ ದುರಾಸೆಯ ಮುಂದೆ ತಾಯಿಯೂ ಇಲ್ಲ ತಂದೆಯೂ ಇಲ್ಲ.

ಆದಿಃ- ಅಂದ ಹಾಗೆ ನೀವು ಚಂದ್ರುವಿನ ಹೆಂಡತಿಯನ್ನು ನೋಡಿದ್ದೀರೇನು?

ದೇವ;- ಯಾಕೆ?

ಆದಿ;- ನೀವು ಬೆಳಿಗ್ಗೆ ಹೇಳಿದ ವಿಚಾರವೂ ಆಕೆಯ ವಿಚಾರವೂ ಒಂದೇ ತರ ಇದೆ, ಆಕೆ ಚಿಕ್ಕಂದಿನಲ್ಲಿ ಪ್ರವಾಹಕ್ಕೆ ಸಿಲುಕಿದ್ದಳು.

ದೇವ:- ಇದ್ದರೂ ಇರಬಹುದೇನೋ. ನಿನ್ನೆ ಬೀದಿಯಲ್ಲಿ ಕಂಡ ಹಾಗಾಯಿತು. ಆದರೆ ಹದಿನೇಳು ವರ್ಷಗಳ ಅಂತರ. ಬದುಕಿದ್ದರೆ ಈಗ ಇಪ್ಪತ್ತೆರಡು ವರ್ಷದ ಯುವತಿ. ಗುರುತೇ ಸಿಗಲಾರದು. ಈಗ ಆ ಮನೆಯಲ್ಲೇ ಇದ್ದಾಳೇನು?

ಆದಿ;- ಇರಬೇಕು. ನಾವು ಇದ್ದಷ್ಟು ಹೊತ್ತು ಆಕೆ ಹೊರಗೆ ಬಂದದ್ದಿಲ್ಲ. ಮುಸಲ್ಮಾನರ ಮನೆಯಲ್ಲಿ ಬೆಳೆದವಳು. ಘೋಷಾ ಅಭ್ಯಾಸ ಇರ ಬಹುದು. ಬೆಳಿಗ್ಗೆ ಹೋಗಿ ನೋಡಿಬರೋಣ.

ದೇವ;- ನಾಳೆ ಊರಿಗೆ ಹೊರಡಬೇಕೆಂದು ಯೋಚಿಸಿದ್ದೇನೆ.

ಆದಿ:- ಇದು ಎಷ್ಟು ಹೊತ್ತು?

ದೇವ:- ಈಗಲೇ ಹೋಗಿಬಂದರೆ ಹ್ಯಾಗೆ?

ಆದಿ;- ಈಗ ರಾತ್ರಿಯಾಯಿತು. ಎಷ್ಟೆಂದರೂ ಆಕೆ ಹೆಣ್ಣುಮಗಳು. ಸಾಕಿದ ತಂದೆಯ ಮುಂದೇ ನಾಚುವ ಯುವತಿಯರು.... ಹಾಗಿರು ವಾಗ ಹಳೆಯ ವಿಚಾರ ಕೆದಕಬೇಕು ಅಲ್ಲದೇ ಅವರೆಲ್ಲರಿಗೂ ತಲೆ ಬಿಸಿಯಾದ ಹೊತ್ತು. ಇನ್ನು ನೀವು ಹೇಗೆ ಹೇಳುತ್ತೀರೋ ಹಾಗೆ.

ದೇವ;- ಹುಂ ನಾಳೆಯೇ ನೋಡೋಣ. ನಮ್ಮ ಶೀಪನಿಗೂ ಈ ವಿಚಾರ ಹೇಳಿದ್ದರೆ ಒಳ್ಳೆಯದಿತ್ತು. ಅಂದಿನ ಆಪತ್ಕಾಲದಲ್ಲಿ ಅವನು ನನಗೆ ತುಂಬಾ ಸಹಾಯ ಮಾಡಿದ್ದನು. ಮಗಳನ್ನು ಕಳೆದುಕೊಂಡ ತಿಂಗಳೊಳಗೆ ನಾನೇನೋ ಸಂಸಾರ ಸಮೇತ ಊರಿಗೆ ಮರಳಿದೆ. ಅವನು ಒಂದೆರಡು ವರ್ಷ ಅಲ್ಲೇ ಇದ್ದು ಕೊನೆಗೆ ಇಲ್ಲಿ ಬಂದು ನೆಲಸಿದ. ನಿನ್ನ ಸಂಬಂಧವನ್ನು ಹೊಂದಿಸಿದವನೂ ಅವನೇ ಅಲ್ಲವೇ? ಇಂಥ ಆತ್ಮೀಯನಿಗೆ ಈಗ ಹತ್ತಿದ ಸುಳಿವು ಹೇಳಲೇ ಬೇಕು. ಆ ಕಡೆಯಿಂದಲೇ ಹೋಗೋಣ. ನೋಡು, ಅವನೇ ಆ ಕಡೆ ಹೋಗುತ್ತಿದ್ದಾನೆ. ಇದಕ್ಕೇ ಅನ್ನಬೇಕು ಯೋಗಾ-ಯೋಗ ಅಥವಾ ಹೃದಯಸಂಯೋಗ. ಶೀಪೂ ಶೀಪಣ್ಣ.... (ಕೈತಟ್ಟಿ ಕರೆಯುತ್ತಾ ಹೋಗುವನು. ಆದಿಮೂರ್ತಿ ಹಿಂಬಾ ಲಿಸುವನು)

— ತೆರೆ —

# ನೋಟ ೧೧

(ದೃಶ್ಯ ೩-೭ರಲ್ಲಿ ಸೂಚಿಸಿದ ಮನೆಯ ಮುಂಭಾಗ. ಕಟ್ಟೆಯ ಮೇಲೆ ಮುದುಕಿ ಕುಳಿತಿದ್ದಾಳೆ. ಮಮತಾ ಬಂದು ನಮಸ್ಕರಿಸುವಳು)

ಮುದುಕಿ:- ಮುತ್ತೈದೆಯಾಗಿ ಮಕ್ಕಳ ತಾಯಾಗಿ ಬಾಳು ಮಗೂ....

ಮಮತಾ:- (ಏನೋ ಹೇಳಲು ತುಟಿ ಅಲಗುವುದು. ಕಣ್ಣು ತುಂಬು ವುದು)

ಮುದುಕಿ:- ಏನು? ಹುಂ, ತಿಳಿಯಿತು. ನನ್ನಿಂದ ಹೀಗಾಯಿತು ಎನ್ನುವ ಮರುಕ ನಿನಗೆ.

ಮಮತಾ:- ನೀವು.... ನೀವು.... ಮಾಫ್....

ಮುದುಕಿ:- ಮಾಫಿ ಮಾಡೋದಕ್ಕೆ ಏನಾಗಿದೆ ಈಗ. ಒಡಹುಟ್ಟಿದ ಅಣ್ಣತಮ್ಮಂದಿರೇ ಒಂದುಗೂಡಲಿಲ್ಲ. ಭಗವಂತನಿಗೆ ಇದೇ ಇಷ್ಟ ವಿರಬೇಕು. ಎಲ್ಲರೂ ಸೇರಿದರು; ಹತ್ತಿರದಲ್ಲಿದ್ದರೂ ಬೇರಾದರು. ಆಗಲಿ, ಹೊಲ ಮನೆ ಹಂಚಿದರೂ ನೆಲ ಒಂದೇ, ಮನಸ್ಸು ಒಂ ದಾಗಿದ್ದರೆ ಸರಿ.

ಮಮತಾ:- (ಮತ್ತೆ ನಮಸ್ಕರಿಸಿ ಪಾದವನ್ನು ಬಿಗಿಯಾಗಿ ಹಿಡಿಯುವಳು)

ಮುದುಕಿ:- ಏಳು, ನಿನ್ನಲ್ಲಿ ಈ ರೀತಿ ಮರುಕ ಇದೆಯಲ್ಲ, ಅದೇ ಸಾಕು. ಒರಟು ಗಂಡುಸನ್ನು ಪ್ರೇಮದಿಂದ ಮೆದುಗೊಳಿಸುವ ಶಕ್ತಿ ಹೆಣ್ಣಿ ಗಿದೆ. ನೀನು ಪ್ರಯತ್ನಿಸಿದರೆ ಬೇರ್ಪಟ್ಟ ಮನೆ ಮತ್ತೆ ಒಂದಾಗ ಬಹುದು.

ದೇವದಾಸ್:- (ಬರುತ್ತಾ) ಮಮತಾ.... ಮಮತಾ....

ಮುದುಕಿ:- ಯಾರು? ನಿಲ್ಲು ಮಗೂ, ನಿನ್ನನ್ನೇ ಕರೆಯುತ್ತಿದ್ದಾರೆ.

ಮಮತಾ:- (ತಲೆಯೆತ್ತಿ ನೋಡಿ ದಿಗ್ಭ್ರಮೆಗೊಳ್ಳುವಳು)

ಮುದುಕಿ:- ನೀವು ಯಾರು? ಈಕೆ ನಿಮಗೆ ಗೊತ್ತೆ?

ಆದಿಮೂರ್ತಿ:- (ಬಂದು) ಈಕೆಯೇ ಏನು ನಿಮ್ಮ ಮಗಳು?

ದೇವ:- ಹೌದು, ಇವಳೇ ನನ್ನ ಮಗಳು ಮಮತಾ....

ಮುದುಕಿ:- ಇವರು ನಿನ್ನ ತಂದೆಯೇನಮ್ಮ?

ದೇವ:- ಹೌದು, ಈಗ ಹದಿನೇಳು ವರ್ಷಗಳ ಹಿಂದೆ ಜಲಪ್ರವಾಹದಲ್ಲಿ.... ನೋಡಿ ಬಲಕೆನ್ನೆಯ ಮೇಲೆ ಒಂದು ಗಾಯದ ಕಲೆ ಇದೆ. ಅದು ಮೆಟ್ಟಿಲ ಮೇಲೆ ಬಿದ್ದು ಆದ ಗಾಯ.

ಮಮತಾ:- (ಸ್ವಲ್ಪ ಹೊತ್ತು ನೋಡಿ) ಅಪ್ಪಾ.... (ಕಾಲಿಗೆ ಬೀಳುವಳು)

ಮುದುಕಿ:- ಯಾರೋ ಎಂದು ಭಾವಿಸಿದ್ದೆ.

ಆದಿ:- ಇವರು ನಮ್ಮ ಮಾವನವರು. ಬಿಹಾರದಲ್ಲಿ ಓವರ್‌ಸೀಯರಾಗಿದ್ದರು. (ಆಗ ತಾನೇ ಬರುತ್ತಿದ್ದ ಪ್ರಭಾಕರನನ್ನು ನೋಡಿ)

ಮುದುಕಿ.- ಕೇಳಿದೆಯೇನೋ? ಬಾ ಇಲ್ಲಿ....

ಪ್ರಭಾಕರ:- ಬರುತ್ತಾ ಇದ್ದೇನಲ್ಲಾ....

ಮುದುಕಿ:- ತಮ್ಮನು ಮದುವೆಯಾದದ್ದು ಮುಸಲ್ಮಾನಿಯನ್ನು ಎನ್ನುತ್ತಿದ್ದೆಯಲ್ಲ? ಈಕೆ ಇವರ ಮಗಳಂತೆ.

ಪ್ರಭಾ:- ಇವರು.... ಆದಿಮೂರ್ತಿಯ ಮಾವ.

ಆದಿ:- ಹೌದು, ಯಾವುದೋ ಊರಿನಲ್ಲಿ ಓವರ್‌ಸೀಯರ್ ಆಗಿದ್ದಾಗ ಜಲಾಶಯದ ಕಟ್ಟೆಯೊಡೆದು ಮನೆಯೊಳಗೆ ನೀರು ನುಗ್ಗಿತಂತೆ. ಅದರಲ್ಲಿ ಈಕೆ.... ಆಗ ಐದು ವರ್ಷದ ಹುಡುಗಿಯಾಗಿದ್ದಳು. ನೀರ ಸೆಳವಿಗೆ ಸಿಕ್ಕಳು.

ಪ್ರಭಾ:- ನೀರ ಸೆಳವಿಗೆ ಸಿಕ್ಕ ಮಗು ಬದುಕುವುದುಂಟೇ? ಬದುಕಿದರೂ ಇವರ ಕೈ ತಪ್ಪಿದ್ದು ಹೇಗೆ?

ಮುದುಕಿ:- ಆಯುಷ್ಯ ಗಟ್ಟಿಯಿದ್ದರೆ ಮೈಲುಗಟ್ಟಲೆ ತೇಲಿ ಹೋದರೂ ಸಾಯುವುದೇ ಇಲ್ಲ. ಚಿಕ್ಕಂದಿನಲ್ಲಿ ನಾನೂ ಒಮ್ಮೆ ಹಳ್ಳಕ್ಕೆ ಬಿದ್ದು ಒಂದೂವರೆ ಮೈಲಿನ ಬಳಿಕ ದಡ ಸೇರಿದೆ.

ಆದಿ:- ಈಕೆಯೂ ಹಾಗೇ ಆಗಿರಬೇಕು.

ಚಂದ್ರು:- (ಬಂದು) ಓ ಎಲ್ಲರೂ ಸೇರಿದ್ದಾರೆ!

ದೇವ:- ಅಷ್ಟೋ ಮೇರೆ ದಾಮಾದ್. (ಬಾರೋ ನನ್ನ ಅಳಿಯ)

ಚಂದ್ರು:- ಕ್ಯಾ ಯಹ್ ಸಚ್ ಹೈ? ಮೈ ಇತನಾ ಬಡ್‌ಭಾಗೀ ಹೂಂ? (ಇದು ನಿಜವೇ? ನಾನು ಇಷ್ಟು ಭಾಗ್ಯಶಾಲಿಯೋ?)

ಆದಿ:- ನೀನು ಭಾಗ್ಯವಂತನೆ. ನನಗೆ ಷಡ್ಡಕನಾದೆ. ಇವರಿಗೆ ಅಳಿಯನಾದೆ.

ದೇವ:- ಎಲ್ಲಕ್ಕೂ ಹೆಚ್ಚಾಗಿ ಅಳಿದ ಮಮತೆಯನ್ನು ಉಳಿಸಿದೆ.

ಆದಿ:- ಮುಳುಗುತ್ತಿದ್ದವಳನ್ನು ಉಳಿಸಿದವನು ಒಬ್ಬ ಮುಸಲ್ಮಾನ.

ದೇವ:- ಮುಸಲ್ಮಾನನೇ?

ಆದಿ:- ಯಾಕೆ? ಜೀವದಾನಕ್ಕೂ ಜಾತಿ ನೀತಿ ಇದೆಯೇ?

ದೇವ:- ಹಾಗಲ್ಲ, ಜನ್ಮತಃ ಕ್ರೂರರು ಮುಸಲ್ಮಾನರು ಎಂತ ನಮ್ಮಲ್ಲಿ ಅನೇಕರು ಹೇಳುತ್ತಾರೆ.

ಆದಿ:- ಕ್ರೂರ ಸ್ವಭಾವ ಮತಧರ್ಮಕ್ಕಾಗಲೀ ಜಾತಿ ದೇಶಗಳಿಗಾಗಲೀ ಸೇರಿದ್ದಲ್ಲ. ಅಂತೂ ಆತ ಮುಸಲ್ಮಾನ. (ಚಂದ್ರುವಿಗೆ) ಉಸ್‌ಕಾ ನಾಮ್ ಕ್ಯಾ ಹೈ? (ಅವರ ಹೆಸರೇನು?)

ಚಂದ್ರು:- ಸೈಯದ್ ಹುಸೇನ್ ಖಾನ್.

ಆದಿ:- ಸೈಯದ್ ಹುಸೇನ್ ಖಾನ್ ಎಂಬ ಕೂಲಿಕಾರ ಮುಸಲ್ಮಾನನು ಪ್ರಯತ್ನಪಟ್ಟು ಬದುಕಿಸಿದ. ಹದಿನೈದು ವರ್ಷದ ಬಳಿಕ ಈಕೆಯ ರಕ್ಷಣೆಗೆ ಪುರಸ್ಕಾರವಾಗಿ ಹಿಂದೂಗಳಿಂದಲೇ ಪತ್ನೀ ಸಮೇತ ಜೀವಂತ ಸುಟ್ಟುಹೋದ.

ದೇವ:- ಹಾಗಂದರೆ?

ಆದಿ:- ದೇಶ ವಿಭಾಗ ಆದ ಮೇಲೆ ಉಂಟಾದ ಕೋಮುವಾರು ವಿರೋಧ, ಗಡಿ ಸಮಸ್ಯೆ, ನಿರಾಶ್ರಿತ ಸಮಸ್ಯೆಗಳು ಅನೇಕ ಸಂಕುಚಿತ ಮತಾಂಧರನ್ನು ಉದ್ರೇಕಗೊಳಿಸಿದುವು. ಈ ಮಧ್ಯದಲ್ಲಿ ಪೋಲಿಗಳಿಗೂ ಅವಕಾಶವಾಯಿತು. ಹೆಸರಿಗೆ ದೇಶಪ್ರೇಮ, ಜಾತಿಪ್ರೇಮ, ಭಾಷಾಪ್ರೇಮ. ಸುಲಿಗೆಮಾಡಿ ಬೊಕ್ಕಸ ತುಂಬಿಕೊಂಡರು. ಅತ್ತ

ಚಾರ ಮಾಡಿ ಕೀಟಿ ಕೀರಿಸಿಕೊಂಡರು. ಯುವತಿಯರನ್ನು ಅರಬದ ಮಾರುಕಟ್ಟೆಗೆ ಸಾಗಿಸುವ ದಳ್ಳಾಳಿಗಳಾದರು. ಮನುಷ್ಯತ್ವವಿಲ್ಲದ ಅಂತಹ ನೀಚರು ಈಕೆಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಾಗ ಈ ಚಂದ್ರ ಆ ರಾವಣಾಸುರನನ್ನು ಓಡಿಸಿ ಬಿಡಿಸಿದನು.

ಸನಾತನಿ:- (ಬಂದು) ಯಾವ ರಾವಣಾಸುರ?

ಆದಿ:- ಯಾವನೋ ನಿನ್ನಂಥವನು.

ಮಮತಾ:- ಸಬ್ ಮಾಫ್ ಕರೆಂ. [ಎಲ್ಲರೂ ಕ್ಷಮಿಸಿರಿ.] (ಹೋಗ ತೊಡಗುವಳು)

ಮುದುಕಿ:- ನಿಲ್ಲು ಮಗು, ಇವರೆಲ್ಲಾ ಊರ ಹಿರಿಯರು ಎಲ್ಲರ ಮುಂದೆ ನಿನ್ನ ವಿಚಾರ ಪ್ರಕಟವಾಗಬೇಕು.

ದೇವ:- ಠಹರೋ ಬೇಟಿ. (ನಿಲ್ಲು ಮಗಳೆ) ಹುಂ, ನಾನೇ ನನ್ನ ಮಗ ಳೊಡನೆ ಬೇರೊಂದು ಭಾಷೆಯಲ್ಲಿ ಆಡಬೇಕಾಯಿತು.

ಆದಿ:- ಬೇರೊಂದು ಭಾಷೆ?

ಸನಾ:- ಅಲ್ಲವೇ?

ದೇವ:- ಆದರೂ ಅದೇ ಭಾಷೆ ನನಗೆ ಮಗಳನ್ನು ನೀಡಿತು.

ಸನಾ:- ಭಾಷೆ ಮಗಳನ್ನು ನೀಡಿತು?

ದೇವ:- ನಾನು ಉತ್ತರ ದೇಶಕ್ಕೆ ಹೋದುದಕ್ಕಾಗಿ ಹಿಂದಿ ಕಲಿಯಬೇಕಾಯಿತು.

ಸನಾ:- ಯಾಕೆ ಹೋಗಬೇಕಾಗಿತ್ತು?

ಆದಿ:- ಭಾರತ ಅಷ್ಟು ವಿಶಾಲ ಯಾಕಾಗ್ಬೇಕಿತ್ತು? ಭೂಮಿ ಗುಂಡಗೆ ಇದ್ದರೂ ರವೆ ಉಂಡೆಯಷ್ಟು ಚಿಕ್ಕದಾಗಿ ಯಾಕೆ ಇರಲಿಲ್ಲ? ಎಂದ ಮೇಲೆ ಒಂದೂರಿನವರು ಇನ್ನೊಂದು ಊರಿಗೆ ಒಂದೊಂದು ಕಾರಣಕ್ಕಾಗಿ ಹೋಗಬೇಕಾಗುತ್ತೆ.

ದೇವ:- ಹಾಗೆ ಹೋದಲ್ಲಿ ಮಗಳನ್ನು ಕಳಕೊಂಡೆ. ಈಗ ಮತ್ತೆ ಅವಳು ದೊರೆತಾಗ, ಆಕೆಗೆ ನಮ್ಮ ಭಾಷೆಯೇ ಮರೆತುಹೋಗಿದೆ. ಕಲಿತ ಬೇರೊಂದು ಭಾಷೆ ಮಮತೆಯ ಮಾತನ್ನು ತಿಳಿಯುವಂತೆ ಮಾಡಿತು. ನನ್ನ ಅಭಿಪ್ರಾಯ ಆಕೆಗೂ ತಿಳಿಯಿತು.

ಸನಾ:- ಮಮತೆ?

ಆದಿ:- ಏ! ಅದು ಇವರ ಮಗಳ- ನನ್ನ ನಾದಿನಿಯ, ಈ ಚಂದ್ರುವಿನ ಹೆಂಡತಿಯ ಹೆಸರು, ಮಮತಾ ಅಂತ. ಒಂದು ಕಾಲದಲ್ಲಿ ಮುಮ್ತಾಜ್ ಆಗಿದ್ದಳು. ಹಾಗೊಂದು ಕಣ್ಣು ಬಿಟ್ಟು ಬಾಯಿ ತೆರೆಯ ಬೇಡ. ಹೆಸರಿನ ಹಿಂದೆ ಏನೂ ಇಲ್ಲ. ಮಮತಾ ಮುಮ್ತಾಜ್ ಆದಳು.

ಸನಾ:- ಹುಂ, ಹೀಗಿದೆಯೇನು? ಅಂದರೆ ಮತಾಂತರ?

ದೇವ:- ಸಾಯಿರೋರು ಬದುಕಿದ್ದೇ ಮತಾಂತರ. ಏನು ಸ್ವಾಮೀ ಕುಡಿಯುವ ಔಷಧಿ, ಕೇಳಿಸಿಕೊಳ್ಳುವ ವಿದ್ಯೆ, ಆಪತ್ತಿನಲ್ಲಿ ದೊರೆಯುವ ಸಹಾಯದಲ್ಲಿಯೂ ಜಾತಿ ಮತ ನೋಡುತ್ತೀರೇನು? ದಯೆ, ಜ್ಞಾನ, ಪರೋಪಕಾರ ಯಾವ ಧರ್ಮದಲ್ಲಿಲ್ಲ? ಯಾವ ಭಾಷೆಯಲ್ಲಿಲ್ಲ? ಇದನ್ನು ಅರ್ಥಮಾಡಿಕೊಳ್ಳಬೇಕಾದರೆ ಒಂದು ಸಮಾನ ಮಾಧ್ಯಮ, ಅದೇ ರಾಷ್ಟ್ರಭಾಷೆಯ ಜ್ಞಾನ ಎಲ್ಲರಿಗೂ ಇರಬೇಕು.

ಸನಾ:- ಮಾವ, ಅಳಿಯ ಒಂದೇ ಬುಡಕಟ್ಟಿನವರು. ಉತ್ತರ ದಕ್ಷಿಣ ಸೇತುವೆಯ ಮಹಾಸ್ತಂಭಗಳು.

ದೇವ:- ಅಂತಹ ಯೋಗ್ಯತೆ ನಮಗೆಲ್ಲಿ ಬರಬೇಕು? ದೊಡ್ಡವರು ಹೇಳಿದ್ದನ್ನು, ಮನಸ್ಸಿಗೆ ಹೊಳೆದುದನ್ನು ನಾವೂ ಹೇಳುತ್ತೇವೆ ಅಷ್ಟೆ. ಈಗ ನೀವು ರಾಮ ಮಂದಿರದ ಪೂಜಕರಲ್ಲವೇ? ಆ ರಾಮ ಎಲ್ಲಿನವನು? ಅಯೋಧ್ಯೆಯ ರಾಮನಿಗೆ ಈ ಊರಿನಲ್ಲಿ ದೇವಾಲಯ ಯಾಕೆ? ನಿಮ್ಮ ಹೆಗಲಲ್ಲಿರುವ ಯಜ್ಞಸೂತ್ರ ಯಾವೂರ ಪದ್ಧತಿ?

ಆದಿ:- ಹಾಂ, ಆದಕ್ಕೇ ದಕ್ಷಿಣದ ದ್ರಾವಿಡರು.... ಆರ್ಯಸಂಸ್ಕೃತಿಯುವರೊಂತ ಬ್ರಾಹ್ಮಣರಿಗೆ, ವೇದ ಶಾಸ್ತ್ರಗಳಿಗೆ ದೇವನಾಗರಿ ಲಿಪಿಗೆ ಸಹಿತ ಬಹಿಷ್ಕಾರ ಹಾಕಿದ್ದು. ಆದರೆ ಇಂದು ಆರ್ಯರು ಆರ್ಯರಲ್ಲ; ದ್ರಾವಿಡರು ದ್ರಾವಿಡರಲ್ಲ; ಎಲ್ಲರೂ ಭಾರತೀಯರು ಅಷ್ಟೇ. ಭಾರತದುದ್ದಕ್ಕೂ ಒಂದೇ ಸಂಸ್ಕೃತಿ! ಸಂಪ್ರದಾಯ ಮಾತ್ರ ಊರಿಗೆ ಅನುಸಾರವಾಗಿ ಬೇರೆ ಬೇರೆ ಇರಬಹುದು ಅಷ್ಟೇ. ಉತ್ತರದ ಮುಸಲ್ಮಾನರ ಆಚಾರಕ್ಕಿಂತ ದಕ್ಷಿಣದ ಮುಸಲ್ಮಾನರ ಆಚಾರ

ದಕ್ಷಿಣದ ಹಿಂದೂಗಳನ್ನೇ ಹೆಚ್ಚು ಹೋಲುತ್ತದೆ. ರೋಮನ್ ಕೆಥೋಲಿಕ್‌ರಿಗಿಂತ ಭಾರತದ ಕ್ರೈಸ್ತರು ಭಾರತೀಯರನ್ನು ಸಂಪ್ರದಾಯದಲ್ಲಿ ಹೋಲುತ್ತಾರೆ. ಪ್ರಕೃತಿಯೇ ಪ್ರದೇಶಗಳನ್ನು ವಿಂಗಡಿಸಿರುವಾಗ ಸ್ವಕೀಯರಲ್ಲೇ ಪರಕೀಯತೆ ಉಂಟಾಗಿರುವುದು ಅಸಂಭವವೇನಲ್ಲ. ಈ ಒಕ್ಕಟ್ಟಿನಲ್ಲಿ ಬಿಕ್ಕಟ್ಟನ್ನು ಕಾಣುವುದು ನಮ್ಮ ಗುರಿ. ಅದನ್ನು ಸಾಧಿಸುವುದೇ ನಿಜವಾದ ನಾಗರಿಕತೆ.

ಮುದುಕಿ:- ನಮಗೆ ನಿಮ್ಮ ಮಾತುಗಳೇ ಅರ್ಥವಾಗುವುದಿಲ್ಲ.

ದೇವ:- ನೋಡಿದಿರಾ, ಕನ್ನಡ ಬಲ್ಲವರಿಗೆ ಕನ್ನಡದಲ್ಲಿ ಹೇಳಿದರೆ ಅರ್ಥವಾಗುವುದಿಲ್ಲ. ಅರ್ಥವಾಗುವುದಕ್ಕೆ ಭಾಷೆಯಲ್ಲ ಮುಖ್ಯ, ಜ್ಞಾನ ಮುಖ್ಯ, ಉದಾರ ಹೃದಯ ಮುಖ್ಯ. ಉದಾರತೆಯೇ ನಮ್ಮ ದೇಶದ ಮೂಲತತ್ತ್ವ. ಇದು ಅಲ್ಲಿಂದ ಇಲ್ಲಿಗೆ ಗುಪ್ತಗಾಮಿನಿಯಾಗಿ ಹರಿದಿದೆ. ಇತಿಹಾಸದಲ್ಲಿ ಕೆಲವು ತಪ್ಪುಗಳಾಗಿರಬಹುದು ಅಥವಾ ನಾವೇ ತಪ್ಪಾಗಿ ಕಲ್ಪಿಸಿರಬಹುದು. ಭಾರತೀಯರು ಮೊದಲಿನಿಂದಲೂ ಉದಾರಿಗಳಾಗಿ ಎಲ್ಲರನ್ನೂ ತಮ್ಮಲ್ಲಿ ಸೇರಿಸಿಕೊಂಡರು. ಆರ್ಯರು ಬಂದರು. ಇಂಗ್ಲಿಷರು ಬಂದರು. ಎಲ್ಲರನ್ನೂ ತನ್ನಲ್ಲಿ ತನ್ನವರನ್ನಾಗಿ ಐಕ್ಯಗೊಳಿಸಿತು ಭಾರತಮಾತೆಯ ಪವಿತ್ರ ಮೂರ್ತಿ.

ಸನಾ:- ಅದೇ ಈ ಆದಿಮೂರ್ತಿ! ಇದೇ ಕಣೋ ನಿನ್ನ ಕನಸಿನ ಅರ್ಥ.

ದೇವ:- ಯಾವ ಕನಸು?

ಆದಿ:- ಮೊನ್ನೆ ಬೆಳಗಿನ ಜಾವದಲ್ಲಿ ನನಗೆ ವಿಚಿತ್ರ ಕನಸೊಂದು ಬಿದ್ದಿತು. ಅದರ ಅರ್ಥವೇನೆಂದು ಈ ಸನಾತನನಿಗೆ ಪ್ರಶ್ನೆ ಹಾಕಿದ್ದೆ. ಅವನು ಉತ್ತರಿಸುವ ಮುಂಚೆ ಈ ಅಣ್ಣತಮ್ಮಂದಿರ ತಿಕ್ಕಾಟ ತಲೆದೋರಿತು. ಈ ಪ್ರಭಾಕರ ಒಡಹುಟ್ಟಿದವರನ್ನು ಬೇರೆ ಜಾತಿ, ಬೇರೆ ಭಾಷೆ ಎಂದು ಭಾವಿಸಿದ್ದ. ಈಗ ಜಾತಿ ಭಾಷೆಗಳು ಬೇರಾಗಿರುವ ರಹಸ್ಯ ತಿಳಿದು ದಿಗ್ಭ್ರಾಂತನಾಗಿದ್ದಾನೆ.

ಪ್ರಭಾ:- ಹಾಗೇನೂ ಇಲ್ಲ. ತಮ್ಮನನ್ನು ಹೊರಗಿನವನೆಂದು ನಾನು ದೂರ ಮಾಡಿದುದಿಲ್ಲ.

ಆದಿ:- ಮತ್ತೆ? ತಾನೇ ಅನುಭವಿಸುತ್ತಿದ್ದುದಕ್ಕೆ ಈತನೂ ಪಾಲಿಗೆ ಬಂದ ಎಂತಲೇ?

ಸನಾ:- ಈ ಮಾತು ನಿಜ. ಸ್ವಾರ್ಥಕ್ಕಾಗಿಯೇ ಸಂಕುಚಿತ ಭಾವನೆ ವಿರೋಧ ಎಲ್ಲಾ....

ಆದಿ:- ಹೌದು, ಸ್ವಾರ್ಥ ಬಲವಾದ್ದರಿಂದಲೇ ಅಖಂಡದಾದ ಆಧಿಪತ್ಯ ತುಂಡುತುಂಡಾಯಿತು. ಪ್ರತ್ಯೇಕತೆಯನ್ನು ಘೋಷಿಸುವ ಇಲ್ಲಿನ ಪ್ರಾಕೃತಿಕ ಸನ್ನಿವೇಶ ಮತ್ತೆ ಸೇರುವುದಕ್ಕೆ ತಡೆಯಾಯಿತು. ಅಡ್ಡ ಗೋಡೆಗಳ ಹಾಗೆ ಭಾರತದ ಬೆಟ್ಟ ಗುಡ್ಡಗಳೂ ನದೀ ನದಗಳೂ ಒಂದು ಕಡೆಯವರು ಇನ್ನೊಂದು ಕಡೆಯವರೊಂದಿಗೆ ಸೇರದಂತೆ ಮಾಡಿದುವು. ಇಷ್ಟಿದ್ದರೂ ಮೂರು ಕಡೆ ಸಮುದ್ರ, ಉತ್ತರದ ಹಿಮಾಲಯ ಶ್ರೇಣಿ ಭರತಖಂಡವನ್ನು ಪ್ರತ್ಯೇಕವಾಗಿಯೂ ಅಖಂಡ ವಾಗಿಯು ಏಕತೆಯ ಸೂತ್ರದಿಂದ ಬಂಧಿಸಿದೆ. ಇದರೊಳಗಿನ ಪ್ರತಿಯೊಬ್ಬರೂ ಪ್ರತ್ಯೇಕವಾಗಿಯಾದರೂ ಬೆಳೆಸಿದ್ದು, ಒಂದೇ ಸಂಸ್ಕೃತಿಯನ್ನು.

ದೇವ:- ಒಬ್ಬ ಹುಡುಗಿ ಒಂದು ಸಲ ಒಂದು ಬೊಂಬೆ ಮಾಡಿಸಿದಳು. ಕುಂಬಾರನ ಬಳಿ ಮಣ್ಣಗೊಂಬೆ ಮಾಡಿಕೊಡು ಎಂದಳು. ಅವನು ಮಾಡಿಕೊಟ್ಟ ಬಣ್ಣಗಾರನಲ್ಲಿ ಬಣ್ಣ ಹಚ್ಚಿಸಿದಳು. ಚಿಪ್ಪಿಗನಲ್ಲಿ ಅದಕ್ಕೆ ಅಂಗಿ ಹೊಲಿಸಿದಳು. ಕಿರುಣಿಯವನಿಂದ ಒಂದು ಆಭರಣ ಇಸಕೊಂಡಳು. ಸರ್ವಾಂಗಸುಂದರವಾದ ಒಂದು ಮೂರ್ತಿ ಆಯಿತಂತೆ. ಹಾಗೆ ಅವರಿವರು ಸೇರಿ ನಮ್ಮ ನೂತನ, ಸ್ವತಂತ್ರ ಭಾರತದ ಮೂರ್ತಿಯ ಸಾಕ್ಷಾತ್ಕಾರವಾಯಿತು. ಇದಕ್ಕೆ ಕಾರಣ ಬಹಳ ಕಾಲದ ನಂತರ ದೊರೆತ ವಿಜ್ಞಾನದ ಕೊಡುಗೆಗಳಾದ ವಾಹನ ಸೌಕರ್ಯ, ಮುದ್ರಾ ಯಂತ್ರ, ಎಲ್ಲಕ್ಕೂ ಹೆಚ್ಚಾಗಿ ಪರಸ್ಪರ ಅರಿತುಕೊಳ್ಳಲು ಸಹಕಾರಿಯಾದ ಒಂದೇ ಇಂಗ್ಲಿಷ್ ಭಾಷೆ.

ಪ್ರಕಾಶ್:- (ಬರುತ್ತಾ) ಅಂಥಾ ಇಂಗ್ಲಿಷ್ ಭಾಷೆ ನಮಗೆ ಬೇಡ ಎನ್ನುತ್ತಾರಲ್ಲ.

ಆದಿ:- ನೀನೂ ಬಂದಿಯೇನು?

ಪ್ರಕಾಶ್:- ಬರುವುದೇನು? ಆಗಿಂದ ಕೇಳುತ್ತಾ ಆ ಕಡೆ ನಿಂತಿದ್ದೆ. ಒಬ್ಬೊಬ್ಬರ ಭಾಷಣವೂ ಜೋರಾಗಿತ್ತು. ಈಗ ಅಟ್ಟ ಹತ್ತಲು ಉಪಯೋಗಿಸಿದ ಏಣಿಯನ್ನು ದೂಡಿಸೋದು ಸರಿಯೇ?

ದೇವ:- ಏರುವುದು ಮುಖ್ಯ ಹೊರತು ಇಳಿಯುವುದು ಬೇಕಾಗಿಲ್ಲ. ಆದರೂ ಇಂಗ್ಲಿಷ್ ಬೇಡ ಅನ್ನೋದಿಲ್ಲ. ಅದನ್ನು ಬಿಟ್ಟರೆ ಪ್ರಪಂಚದಿಂದ ನಾವು ದೂರ ಸರಿದ ಹಾಗೆ. ಆದರೆ ನಮ್ಮೊಳಗೆ, ಇಡೀ ದೇಶದೊಳಗೆ, ಎಲ್ಲಕ್ಕೂ ಹೆಚ್ಚಾಗಿ ಹಳ್ಳಿಗಳೊಡನೆ ವ್ಯವಹಾರಕ್ಕಾಗಿ ಹಿಂದಿ ರಾಷ್ಟ್ರಭಾಷೆಯಾಗಿರಬೇಕು ಎಂದಿರೋದು. ಹಿಂದೊಮ್ಮೆ ಸಂಸ್ಕೃತಭಾಷೆ ಆಸೇತು ಹಿಮಾಚಲದ ವರೆಗೆ ವ್ಯಾಪಿಸಿತ್ತು. ಇಂದು ಅದು ವೃತಭಾಷೆಯಾದರೂ ಸುಪ್ತವಾಗಿ ಎಲ್ಲೆಡೆಯೂ ಎಲ್ಲಾ ಭಾಷೆಗಳಲ್ಲೂ ಜೀವನಾಡಿಯಾಗಿದೆ. ಆಧುನಿಕ ಜಗತ್ತಿನಲ್ಲಿ ಅದರ ಬಳಕೆ ಸುಲಭವಲ್ಲದ್ದರಿಂದ ಹಿಂದಿಯನ್ನೇ ಬಳಸಬೇಕಾಯಿತು. ದೇಶದ ಬಹು ಸಂಖ್ಯಾತರ ಭಾಷೆಯಾದ್ದರಿಂದ, ಅಲ್ಲದೆ ಈಗಾಗಲೇ ಸಾಕಷ್ಟು ಪ್ರಚಾರವಾಗಿ ಸುಲಭವಾಗಿರುವುದರಿಂದ ದಕ್ಷಿಣದವರು ಅದನ್ನು ಕಲಿಯಬೇಕಾಯಿತು.

ಉದಯ:- (ಬಂದು) ಸಾಧ್ಯವಿಲ್ಲ.

ಮುದುಕಿ;-ನೀನು ಯಾಕೋ ದೊಡ್ಡವರ ಮಾತಿನಲ್ಲಿ ಬಾಯಿ ಹಾಕುತ್ತೀ?

ಉದಯ:- ಇದು ನನಗೆ ಸಂಬಂಧಿಸಿದ ವಿಚಾರ. ಎರಡೆರಡು ಭಾಷೆಗಳನ್ನು ಕಲಿಯುವುದು ನಮ್ಮಿಂದ ಸಾಧ್ಯವಿಲ್ಲ. ನಮ್ಮ ಬುದ್ಧಿಶಕ್ತಿಯನ್ನೆಲ್ಲಾ ಭಾಷೆ ಕಲಿಯುವುದಕ್ಕೆ ವಿನಿಯೋಗಿಸಿದರೆ ವಿಜ್ಞಾನ ಯುಗದಲ್ಲಿ ಇತರ ರಾಷ್ಟ್ರಗಳೊಡನೆ ತಲೆಯೆತ್ತಿ ನಿಲ್ಲಲು ಸಾಧ್ಯವಿಲ್ಲ.

ಪ್ರಕಾಶ್:- ಹುಡುಗನಾದರೂ ಭವಿಷ್ಯ ಅರ್ಥಮಾಡಿಕೊಂಡಿದ್ದಾನೆ.

ದೇವ:- ಭವಿಷ್ಯ ಅರ್ಥಮಾಡಿಕೊಂಡದ್ದಲ್ಲ. ಎಳೆಯ ಮಕ್ಕಳು ಎಳೆದಂತೆ ಸಾಗುವವರು. ನಿಮ್ಮಂಥವರ ನೆರಳಿನಲ್ಲಿ ನಿಮ್ಮ ಅನುಕರಣೆಯೇ ಬಂದೀತು.

ಪ್ರಕಾಶ್;- ಅದು ತಪ್ಪೇನು?

ದೇವ:- ತಪ್ಪು ಎಂತ ಅಲ್ಲ. ಹೊರಗಿನವರಿಗಾದರೂ ಕೊಟ್ಟೇನು, ಒಡ

ಹುಟ್ಟಿದವರಿಗೆ ಕೊಡಲಾರೆ ಎನ್ನುವ. ಮನೆಗೆ ಮಾರಿ, ಪರೋಪ ಕಾರಿಯ ನೀತಿ ಇದು. ಸ್ವಾರ್ಥಸಾಧನೆಗಾಗಿ ಅಭಿಮಾನಶೂನ್ಯ ರಾಗಬಾರದು.

ಪ್ರಕಾಶ್:- ನಾನು ಅಭಿಮಾನಶೂನ್ಯನಲ್ಲ; ಜಗತ್ತಿನ ಜೊತೆಯಲ್ಲಿ ನಾವೂ ಮುಂದುವರಿಯಬೇಕೋ ಬೇಡವೊ? ನಿಮ್ಮ ಕುರುಡು ನಂಬಿಕೆ ಯಿಂದಲೇ ಇಂಡಿಯಾ ಬರಡು ಆಗಿರೋದು! ಅಪ್ಪ ನಟ್ಟ ಆಲದ ಮರ ಅಂತ....

ಉದಯ:- ನೇಣು ಹಾಕಿಕೊಳ್ಳಬೇಕೇನು?

ಪ್ರಭಾ:- ನೋಡಿದಿರಾ ಒಂದೇ ತಿಂಗಳಲ್ಲಿ ಎಷ್ಟು ತಯಾರಾಗಿದ್ದಾನೆ!

ಆದಿ:- ಹೀಗೆಯೇ ಮುಂದುವರಿದರೆ, ಇದ್ದದ್ದನ್ನೂ ಹಾಳುಮಾಡಿ ತನಗೆ ಮಾತ್ರವಲ್ಲ ಎಲ್ಲರಿಗೂ ಗೋಳು ತಂದಿಡುತ್ತಾನೆ.

ಉದಯ:- ಗೋಳು ತರುವವರು ನೀವು!

ಮುದುಕಿ:- ಯಾರಿಗೋ ನೀನು ಅನ್ನುತ್ತಾ ಇರೋದು?

ಉದಯ:- ನೀನು ಬಾಯಿ ಮುಚ್ಚೋ, ನಿನ್ನಿಂದಲೇ ಇಷ್ಟೆಲ್ಲಾ!

ಸನಾ:- ಯಾಕೋ? ಈ ತಾಯಿ ನಿನ್ನನ್ನು ಮಾತ್ರ ಹಡೆಯಬೇಕಾಗಿತ್ತು ಅಲ್ಲ?

ಮುದುಕಿ:- ಇಂಥವನು ಹುಟ್ಟದಿದ್ದರೇ ಚೆನ್ನಾಗಿತ್ತು.

ದೇವ:- ಹುಟ್ಟಿದ ಮೇಲೆ ರೊಟ್ಟಿ ಕೊಡಬೇಕೋ ಬೇಡವೋ? ಹುಟ್ಟಿ ದವರನ್ನು ಸಾಯಿಸುವಷ್ಟು ದೇಶ ಕೆಟ್ಟುಹೋಗಿಲ್ಲವಲ್ಲ?

ಪ್ರಭಾ:- ಇನ್ನು ಆ ಕಾಲವೂ ದೂರದಲ್ಲಿಲ್ಲ ಇದ್ದ ನೆಲ ಹರಿ ಹಂಚಾದ ಮೇಲೆ.

ದೇವ:- ನೆಲವನ್ನು ಹಂಚಿದ್ದು ಕೆಲಸವನ್ನು ಹಂಚಿಕೊಳ್ಳುವುದಕ್ಕೆ. ನಮ್ಮ ಗಣರಾಜ್ಯದ ತತ್ವವೂ ಅದೇ! ತಮ್ಮ ತಮ್ಮ ಪ್ರದೇಶಗಳನ್ನು ಹಸನುಗೊಳಿಸುವುದಕ್ಕಾಗಿಯೇ ಪ್ರಾಂತ್ಯಗಳ ರಚನೆ. ಎಲ್ಲ ಘಟಕ ಗಳೂ ಒಂದಕ್ಕೊಂದು ಪೂರಕ! ಒಡಹುಟ್ಟಿದ ನೀವು ಇನ್ನಾದರೂ ಒಂದಾಗಿ ಬಾಳಬೇಕು.

ಪ್ರಕಾಶ್:- ಬಾಳುವ ದಾರಿಗೇ ಬೇಲಿ ಬಿತ್ತಲ್ಲ? ಒಬ್ಬೊಬ್ಬರ ಮಾತೂ ಇನ್ನೊಬ್ಬರಿಗೆ ಅರ್ಥವಾಗದ ಮೇಲೆ ಯೂನಿಟಿ ಎಲ್ಲಿಂದ ಬಂದೀತು?

ದೇವ:- ನಿನ್ನ ಯೂನಿಟಿ ಅಂದರೆ ಐಕ್ಯ ಭಾಷೆಯಲ್ಲಿಯೂ ಇಲ್ಲ. ಕೋಶದಲ್ಲಿಯೂ ಇಲ್ಲ. ಅದು ಸಿಗುವುದು ಭಾವದಲ್ಲಿ. ಭಾವಕ್ಕೆ ಭಾಷೆ ಬೇಡ.

ಉದಯ:- ಅಂದರೆ ಎಲ್ಲರೂ ಮೂಗರಾಗಿದ್ದರೆ ಸರಿ!

ಆದಿ:- ಅದೂ ತಪ್ಪಲ್ಲ. ಮೌನಿನಃ ಕಲಹೋ ನಾಸ್ತಿ.

ಸನಾ:- ಕವಳವೂ (ತುತ್ತೂ) ನಾಸ್ತಿ.

ದೇವ:- ಅನ್ನಕ್ಕೆ ತೊಂದರೆಯಾದರೆ ಯಾವ ಭಾಷೆಯಾದರೂ ತಾನಾಗಿಯೇ ಬರುತ್ತದೆ ಉದ್ಯೋಗಕ್ಕಾಗಿ ಉತ್ತರಕ್ಕೆ ಹೋದ್ದರಿಂದಲ್ಲವೇ ನನಗೆ ಹಿಂದಿ ಬಂದಿರುವುದು? ಕೆಲವನ್ನು ನಾವು ಕಲಿತರೆ ಇನ್ನು ಕೆಲವನ್ನು ಪರಿಸ್ಥಿತಿ ಕಲಿಸುತ್ತದೆ. ಇಂಗ್ಲಿಷರು ಒಮ್ಮೆಲೇ ಇಂಗ್ಲಿಷಿನಲ್ಲಿ ವ್ಯವಹರಿಸಿದಾಗ ಅಗತ್ಯವಿದ್ದವರು ಕಲಿಯಲಿಲ್ಲವೇ? ಅಗತ್ಯವಿಲ್ಲದವರು ಬಿಟ್ಟರು ಆದರೂ ಬದುಕಿದರು.. ಈಗ ಮನವೊಲಿಸಿ ಅವಧಿ ಕೊಟ್ಟು ನಿಧಾನವಾಗಿ ನಮ್ಮದೇ ಭಾಷೆಯನ್ನು ವ್ಯವಹಾರಕ್ಕೆ ತರೋಣ ಎಂದರೆ ಓದಿದ ಮಂದಿಗೆ ಆಗುವುದಿಲ್ಲ ಎಂದಾದರೆ ಇಂತಹ ಅವಿವೇಕಕ್ಕೆ ಏನು ಹೇಳುವುದು?

ಪ್ರಕಾಶ್:- ಇದು ಅವಿವೇಕ ಅಲ್ಲ; ಪರಿಸ್ಥಿತಿಯ ಪರಿಜ್ಞಾನ.

ದೇವ:- ಪ್ರಜಾಪ್ರಭುತ್ವದಲ್ಲಿ ಇದನ್ನೇ ವಿಶಾಲವಾಗಿ ನೋಡಬೇಕು. ಈಗ ನಾವೆಲ್ಲರೂ ಕನ್ನಡವನ್ನೇ ಆಡುವವರು. ಆದರೆ ನನ್ನ ಮಾತಿನ ರೀತಿ ಬೇರೆ, ನಿಮ್ಮ ಮಾತು ಬೇರೆ. ಈ ಸನಾತನಿಯ ಮಾತು ಬೇರೆ. ಕೆಲವೊಮ್ಮೆ ಕನ್ನಡವೇ ಆದರೂ ಪರಸ್ಪರ ಅರ್ಥವಾಗುವುದು ಕಷ್ಟ. ಒಂದು ಕನ್ನಡದಲ್ಲೇ ಜಿಲ್ಲೆಗೊಂದು ಸೀಮೆಗೊಂದು ವ್ಯತ್ಯಾಸ. ಇದು ಸ್ವಾಭಾವಿಕ. ಅದಕ್ಕೇ ವಿಶಾಲ ದೇಶದಲ್ಲಿ ಅಸಂಖ್ಯಾತ ಭಾಷೆಗಳಿರೋದು. ಇದನ್ನು ಒಂದು ಸೂತ್ರದಲ್ಲಿ ಬಂಧಿಸುವುದಕ್ಕಾಗಿಯೇ ರಾಷ್ಟ್ರಭಾಷೆ ಇರೋದು. ಭಾಷಾವಾರು ಪ್ರಾಂತ್ಯ ರಚನೆಯಾದರೂ ಒಂದೇ ಭಾಷೆಯವರು ಯಾವ ಪ್ರಾಂತ್ಯ

ದಲ್ಲಿಯೂ ಇಲ್ಲ. ಮನೆಯಲ್ಲಿ ಮನೆಮಾತು, ಊರಲ್ಲಿ ಊರ ಮಾತು, ಪ್ರಾಂತ್ಯದಲ್ಲಿ ಪ್ರಾಂತ್ಯಭಾಷೆ, ರಾಷ್ಟ್ರದಲ್ಲಿ ರಾಷ್ಟ್ರಭಾಷೆ.

ಪ್ರಕಾಶ್:- ಪ್ರಪಂಚದಲ್ಲಿ ಇಂಟರ್ ನೇಷನಲ್ ಲೇಂಗ್ವೇಜ್.

ಆದಿ:- ಮನೆಯೊಳಗೆ ಒಂದು ಉಡುಪು, ಊರಲ್ಲಿ ಒಂದು ಉಡುಪು, ದೂರ ಹೋದಾಗ ಬೇರೆ ಉಡುಪು....

ಸನಾ:- ವೇಷ ಬದಲಾದರೂ ಮನುಷ್ಯ ಒಬ್ಬನೇ. ಭಾಷೆ ಬೇರಾದರೂ ಭಾವ ಒಂದೇ.

ನೂತನ:- (ಏದುತ್ತಾ ಬಂದು) ಅಪ್ಪಾ! ಅಪ್ಪ! ತಮ್ಮನ ಮೇಲೆ ಗೋಡೆ ಕಲ್ಲುರುಳಿತು.

ದೇವ:- ಯಾವ ಗೋಡೆಯೋ?

ನೂತನ:- ಅಂಗಳದ ಗೋಡೆ ನಾವೂ ಪಕ್ಕದ ಮನೆಯ ಮಕ್ಕಳೂ ಆಡುತ್ತಿದ್ದೆವು. ತಮ್ಮ ಗೋಡೆ ಹತ್ತುತ್ತಿದ್ದಾಗ ಕಲ್ಲು ಜಾರಿತು.

ಆದಿ:- ತುಂಟ ಮಕ್ಕಳು. (ಹೋಗುವನು)

ದೇವ:- ನಾವೂ ಹೋಗೋಣ.

ಮುಕುಂದ:- ಮಗುವಿಗೆ ಏನಾಯ್ತು? ನಾನೂ ಬರುತ್ತೇನೆ. (ಚದರುವರು)

— ತೆರೆ —

— ನಿವೇದನಾವಕಾಶ —

## ನೋಟ ೧೨

[ಆದಿಮೂರ್ತಿಯ ಮನೆಯ ಹಿಂಭಾಗ. ಅಂಗಳದ ಗೋಡೆಯ ಕಲ್ಲುಗಳನ್ನು ಆದಿಮೂರ್ತಿ ಕೆಡವುತ್ತಿದ್ದಾನೆ]

ದೇವದಾಸ್:-(ಬಂದು) ಏನೋ ಇದು? ಮಗುವಿಗೆ ಹೇಗಿದೆ? ಅಪಾಯವಾಗಿಲ್ಲ ತಾನೆ?

ಆದಿಮೂರ್ತಿ:- ಪಕ್ಕದ ಮನೆಯವರ ದಯದಿಂದ ದೊಡ್ಡ ಗಂಡಾಂತರ ತಪ್ಪಿತು.

ಸನಾತನಿ:- (ಬಂದು) ಈಗ ಗೋಡೆಯನ್ನು ಯಾಕೆ ಕೆಡವುತ್ತಿ?

ಆದಿ:- ಅದು ಇದ್ದಿದ್ದಕ್ಕೇ ಈ ಅನಾಹುತ.

ಸನಾ:- ಮನೆಯಲ್ಲಿ ಹೆಗ್ಗಣ ಇದೇಂತ ಯಾರಾದರೂ ಮನೆಗೆ ಬೆಂಕಿ ಹಚ್ಚುತ್ತಾರೇನು? ಮಕ್ಕಳು ಎಲ್ಲಿದ್ದರೂ ಬೀಳುತ್ತವೆ.

ಆದಿ:- ಅದಕ್ಕಾಗಿ ಗೋಡೆ ಕೆಡವುತ್ತಿಲ್ಲ. ಹುಡುಗ ಗೋಡೆ ಹತ್ತುತ್ತಿದ್ದಾಗ ಒಂದು ಕಲ್ಲು ಜಾರಿತು. ಈ ಕಡೆ ಬಿದ್ದ ಕಲ್ಲು ಆತನ ಕಾಲ ಮೇಲೆ ಬಿತ್ತು. ಇದನ್ನು ಗಮನಿಸಿದ ಪಕ್ಕದ ಮನೆಯವರು ಹಾಗೆ ಸುತ್ತುಹಾಕಿಕೊಂಡಾದರೂ ಓಡಿ ಬಂದು ಮಗುವನ್ನು ಎತ್ತಿ ಉಪಚರಿಸಿದರು. ಸಣ್ಣ ಗಾಯ, ತೊಂದರೆಯಾಗಲಿಲ್ಲ. ಹೆಚ್ಚೇನಾದರೂ ಆಗಿದ್ದರೆ? ಹತ್ತಿರದಲ್ಲಿದ್ದವರೂ ನೆರವಿಗೆ ಧಾವಿಸಿ ಬಾರದಂತೆ ಈ ಅಡ್ಡಗೋಡೆ ತಡೆಯುತ್ತದೆ. ಮನಸ್ಸು ಒಂದಾದ ಮೇಲೆ ಮನೆಯನ್ನು ಬೇರ್ಪಡಿಸುವ ಈ ಅಡ್ಡಗೋಡೆ ಏಕೆ?

ದೇವ:- ಅದು ನಿಜ, ಒಂದೇ ಮನೆಯನ್ನು ಅಡ್ಡಗೋಡೆ ಹಾಕಿ ಬೇರ್ಪಡಿಸಿದರೆ ಬಾಡಿಗೆ ಆದಾಯದ ದೃಷ್ಟಿಯಿಂದ ಚೆನ್ನಾಗಿರುತ್ತೆ. ಆದರೆ ಹೊಂದಾಣಿಕೆಗೆ ತೊಂದರೆ.

ಸನಾ:- ಆದರೂ ಧಾವಿಸಿ ಬರಲಿಲ್ಲವೇ? (ಪ್ರಭಾಕರ, ಪ್ರಕಾಶ್ ಮುಂತಾದ ಎಲ್ಲರೂ ಬರುತ್ತಾರೆ)

ಮುದುಕಿ:- ಏನಾಗಿದೆ ಮಗುವಿಗೆ?

ಎಲ್ಲರೂ:- ಹುಡುಗನಿಗೆ ಏನೂ ಆಗಿಲ್ಲ ತಾನೆ?

ಮಾಯಾವತಿ:-(ಒಳಗಿನಿಂದ ಬಂದು) ನೀವೆಲ್ಲಾ ಬಂದುದನ್ನು ನೋಡಿ ಹುಡುಗ ತಾನೂ ಅಂಗಳಕ್ಕೆ ಬರುತ್ತೇನೆ ಎನ್ನುತ್ತಿದ್ದಾನೆ.

ಆದಿ:- ಈಗ ಸುಮ್ಮನೇ ಮಲಗಿರಲಿ. ಕಟ್ಟಿದ ಬ್ಯಾಂಡೇಜಿನಿಂದ ಮತ್ತೆ ರಕ್ತ ಸುರಿದೀತು. ಇಲ್ಲಿ ನೋಡು. ಈಕೆ ನಿನ್ನ ತಂಗಿ.

ಮಾಯಾ:- ಮಮತಾ!

ಮಮತಾ:- ಅಕ್ಕ!

ಸನಾ:- ಈಗ ತಿಳಿಯಿತು ಚಂದ್ರು ಯಾಕೆ ಮೊನ್ನೆ ಇವರನ್ನೇ ನೋಡುತ್ತಾ ನಿಂತ ಎಂದು. ಅಕ್ಕತಂಗಿಯರದು ಹೆಚ್ಚು ಕಡಿಮೆ ಒಂದೇ ತರದ ಹೋಲಿಕೆ.

ದೇವ:– ನನ್ನನ್ನು ನೋಡುತ್ತಿದ್ದುದೂ ಇದಕ್ಕೇ ಇರಬೇಕು.

ಆದಿ:– ಅಂತೂ ಆಪತ್ತಿನ ಭೀತಿಯಲ್ಲಿ ಎಲ್ಲರೂ ಬಂದು ಸೇರಿದ್ದೀರಿ. ಈ ಐಕ್ಯ ಶಾಶ್ವತವಾಗಿರಲಿ. ಎಲ್ಲರೂ ಒಟ್ಟಿಗೆ ಏನಾದರೂ ಪಾನೀಯ ತೆಗೆದುಕೊಳ್ಳಬೇಕು. ನೂತನ, ಪಕ್ಕದ ಮನೆಯವರನ್ನೂ ಬರ ಹೇಳು. ಒಂದು ಸ್ನೇಹಕೂಟ ನಡೆಯಲಿ.

ಸನಾ:– ಅವರಿಗೆ ಯಾವ ಭಾಷೆಯೋ?

ಆದಿ:– ಮನಸ್ಸಿನ ಭಾಷೆ, ಮನುಷ್ಯ ಜಾತಿ.

ಚಂದ್ರು:– ಇನ್ನು ಆದೆಲ್ಲ ಭೇದ ಭಾವ ಬರಲೇ ಕೂಡದು.

ಪ್ರಕಾಶ್:– ಓವರ್ ಎ ಕಪ್ ಓಫ್ ಟೀ, ನಾವು ಹೋಗಬಹುದಲ್ಲ?

ಉದಯ:– ಹೋದರೂ ಮತ್ತೆ ಸೇರಲೇ ಬೇಕು. ಎಲ್ಲರೂ ಕೂಡಿದ್ದರೆ ಕಾಲ ಸರಿದದ್ದೇ ತಿಳಿಯೋದಿಲ್ಲ, (ಮಾಯಾವತಿ ಮಮತಾ ಒಳಗೆ ಹೋಗುತ್ತಾರೆ.)

ದೇವ:– ಎಲ್ಲರೂ ಜಗಲಿಯಲ್ಲಿ ಕುಳಿತುಕೊಳ್ಳುವಾ. **ಮಾಯಾ ಮಾಡು ತ್ತಾಳೆ, ಮಮತಾ ನೀಡುತ್ತಾಳೆ.**

ಸನಾ:– ನಾವೆಲ್ಲಾ ಪಾಲಿಗೆ ಬಂದ ಪಂಚಾಮೃತವನ್ನು ಸ್ವೀಕರಿಸುತ್ತೇವೆ.

ಆದಿ:– ಪಂಚಾಮೃತ?

ಸನಾ:– ಹೂಂ, ಆದೊಂದು ಪವಿತ್ರವಾದ ಮಧುರ ವಸ್ತು. ಐದು ಬಗೆಯ ಮಧುರ ಪದಾರ್ಥಗಳನ್ನು ಸೇರಿಸಿ ಪಂಚಾಮೃತವೆಂದು ಹೆಸರಿಟ್ಟು ಹಿಂದಿನ ಮಂದಿ ದೇವರಿಗೊಪ್ಪಿಸುವ ಪದ್ಧತಿಯನ್ನು ಆಚರಣೆಗೆ ತಂದರು. ಆ ಕೂಟವೇ ಪಂಚಾಮೃತ, ಪರಮಾತ್ಮನಿಗೆ ಪ್ರಿಯ ವಾದುದು. (ಇನ್ನೂ ಒಬ್ಬಿಬ್ಬರು ಬಂದು ಸೇರುವರು)

ದೇವ:– ನಮ್ಮ ಸಂಸ್ಕೃತಿ ಇಂತಹ ಸಮದೃಷ್ಟಿಯನ್ನು ಅನಾದಿಯಿಂದಲೂ ಸಮರ್ಥಿಸುತ್ತಿದೆ. ನಿತ್ಯ ಉಪಯೋಗಿಸುವ ನೀರಿನಲ್ಲಿಯೂ "ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ । ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು" ಎಂಬುದಾಗಿ ಭಾರತದ ಎಲ್ಲಾ ಪುಣ್ಯನದಿಗಳನ್ನೂ ಪ್ರತ್ಯಂತ್ಯ ಭೇದವಿಲ್ಲದೇ ಸ್ಮರಿಸುತ್ತೇವೆ

ಭಾರತದ ಈ ಮೂಲಭೂತವಾದ ಒಕ್ಕಟ್ಟು ಯುಗಯುಗಾಂತರ ಗಳಿಂದ ಸನಾತನವಾಗಿ ಉಳಿದಿದೆ.

ಆದಿ:– ಸಂಸ್ಕೃತಿ ಸನಾತನ, ಈ ಸನಾತನಿ ಅಲ್ಲ.

ಸನಾ:– ಯಾಕೋ ಹದ್ದಿನ ಕಣ್ಣು ಹೋತನ ಮೇಲೆ ಅಂತ....

ಪ್ರಕಾಶ್:– ನಮ್ಮ ಕಣ್ಣು ಕಾಫಿ ಮೇಲೆ. (ಮಮತಾ ಕಾಫಿ ಕೊಡುವಳು ಒಳಗಿಂದ ಹಾಡು ಕೇಳಿಸುವುದು)

ಪ್ರಭಾ:- ಅದೇನು ಒಳಗಡೆ ಸಂಗೀತ ಕೇಳಿಸುತ್ತಾ ಇದೆಯಲ್ಲ?

ಮಾಯಾ:–(ಬಾಗಿಲಲ್ಲಿ ನಿಂತು) ಆ ಮನೆ ಮಕ್ಕಳೂ ಈ ಮನೆ ಮಕ್ಕಳೂ ಒಳಗಡೆ ಸಭೆ ಸೇರಿದ್ದಾರೆ. ಒಟ್ಟಾಗಿ ಹಾಡುತ್ತಿದ್ದಾರೆ. (ಎಲ್ಲರೂ ಹಾಡು ಗಮನಿಸುತ್ತಿರುವಂತೆ ಮೌನವಾಗಿರುವರು. ಹಾಡು ಕೇಳಿಸುವುದು)

ಜಗವೆಲ್ಲ ನನ್ನೂರು ಭಾರತವೆ ನನ್ನ ಮನೆ
ಕನ್ನಡದ ನಾಡು ನಾನಿರುವ ಕೋಣೆ.
ಊರಲ್ಲಿ ಬೇಹಾರ, ಮನೆಯಲ್ಲಿ ಆಹಾರ ।
ಆದರೂ ಹಿರಿಯ ಗುಡಿ ನನ್ನ ಕೋಣೆ ॥
ಹಿರಿಯವನು ನನ್ನಣ್ಣ ಕಿರಿಯವನು ನನ್ ತಮ್ಮ
ಎಲ್ಲರೂ ನನ್ನ ಒಡಹುಟ್ಟಿದವರು.
ಹಿರಿಯಾಕೆ ನನ್ನಕ್ಕ ಕಿರಿಯಾಕೆ ನನ್ ತಂಗಿ
ನಾವೆಲ್ಲ ಈ ಜಗವ ಕಟ್ಟಿದವರು ॥
ಕೋಣೆಯಲಿ ಕುಳಿತಾಗ ಉಳಿದವರ ಮರೆತಾಗ
ಗಾಳಿಯೇ ತೆರೆಯುವುದು ಎದೆಯ ಕದವ
ಜೀವನದ ರಂಗದಲಿ ಅನ್ಯೋನ್ಯ ಸಂಗದಲೆ
ಪ್ರೇಮವೇ ಕಳೆವುದೋ ಮನದ ಮದವ ॥
ದನಿಯಂತೆ ನುಡಿ ಬೇರೆ ಅಡಿಯಂತೆ ನಡೆ ಬೇರೆ.
ರೂಪ ಬೇರಾದರೂ ತಾಪ ಒಂದೇ.
ಹುಟ್ಟುಬರೆ, ಹೊಟ್ಟೆ ಹೊರೆ, ಕಟ್ಟು ಮನೆ, ಎಳೆದು ಗೆರೆ
ರೋಗ ಸಾವೆಲ್ಲರಿಗೂ ತಾಪವೊಂದೇ ॥

ಹುಟ್ಟಿದ್ದು ನೆನೆಯೋಣ, ಕಟ್ಟಿದ್ದು ಮರೆಯೋಣ
ಒಟ್ಟಾಗಿ ಬಾಳುವೆಯ ಸಾಧಿಸೋಣ.
ಎಲ್ಲರೂ ನನಗಿಹರು ಎಲ್ಲರಿಗೂ ನಾನಿಹೆನು
ಭಾವೈಕ್ಯ ತತ್ವವನು ಬೋಧಿಸೋಣ ||

(ಎಲ್ಲರೂ ಕಾಫಿ ಕುಡಿದು ಮುಗಿಸುವರು)

ಪ್ರಭಾಕರ:- (ಏಳುತ್ತಾ) ಇನ್ನು ನಾವೆಲ್ಲರೂ ಬರೋಣವೇ?

ನೂತನ:- (ಬಂದು) ಸಭೆ ಮುಗಿದಾಗ ರಾಷ್ಟ್ರಗೀತೆ ಹೇಳಬೇಡವೇ?

ಪ್ರಕಾಶ್:- ಇದೇನು ರಾಷ್ಟ್ರೀಯ ಸಮಾರಂಭವೇ?

ದೇವದಾಸ್:- ಐಕ್ಯಕ್ಕಿಂತ ದೊಡ್ಡ ರಾಷ್ಟ್ರೀಯ ಸಮಾರಂಭವಿಲ್ಲ. ನಮ್ಮ ನೂತನ ಪ್ರಜೆಯಾದ ನೂತನನಿಗೆ ರಾಷ್ಟ್ರಪ್ರೇಮದ ಉತ್ಸಾಹವಿದ್ದಾಗ ಹಿರಿಯರು ಹಿಂದುಳಿಯಬಾರದು. ಆದರೆ ಕ್ರಮ ತಪ್ಪಬಾರದು. ಎಲ್ಲರೂ ನೆಟ್ಟಗೆ ನಿಂತು ರಾಷ್ಟ್ರಕಲ್ಯಾಣಕ್ಕಾಗಿ ರಾಷ್ಟ್ರಗೀತೆ ಹಾಡುವ.

ಜನ ಗಣ ಮನ .......... ಜಯಹೇ .........

(ಶಂಖಧ್ವನಿಯೊಂದಿಗೆ ಪರದೆ ಇಳಿಯುವುದು)

|| ಮಂಗಳಂ ||

